ಶತಮಾನೋತ್ಸವ ಸ್ಮೃತಿಮಾಲೆ-೫

# ಹಸ್ತಪ್ರತಿಶಾಸ್ತ್ರ ಪರಿಚಯ

ಬಿ. ಎಸ್. ಸಣ್ಣಯ್ಯ






ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ
ಬೆಂಗಳೂರು
೧೯೯೨

Decennial Publication Series—5
HASTHAPRATHI SHASTRA PARICHAYA
(Manuscriptology) by B. S. Sannaiah, Published by
B. M. Sri. Smaraka Prathishthana, 54, 3rd Cross
Gavipuram Extension, Bangalore-560 019.

First Impression 1992
1,000 Copies

Pages : 108+8 Price : Rs. 15/-







ಬೆಲೆ : ಹದಿನೈದು ರೂಪಾಯಿಗಳು



ಮುದ್ರಣ : ನೇತ್ರಾ ಪ್ರಿಂಟರ್ಸ್
ಚಾಮರಾಜಪೇಟೆ, ಬೆಂಗಳೂರು-560 018



# ಮುನ್ನುಡಿ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನವು ಸ್ಥಾಪನೆಯಾಗಿ ಹನ್ನೆರಡು ವರ್ಷಗಳಾದುವು. ೧೯೭೯ರ ಮೇ ೬ ರಂದು ರಾಷ್ಟ್ರಕವಿ ಕುವೆಂಪು ಅವರಿಂದ ಉದ್ಘಾಟನೆಯಾದ ಪ್ರತಿಷ್ಠಾನ ಪೋಷಕರಾಗಿದ್ದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಪ್ರಥಮ ಅಧ್ಯಕ್ಷರೂ ಗೌರವಾಧ್ಯಕ್ಷರೂ ಆದ ನಿಟ್ಟೂರು ಶ್ರೀನಿವಾಸರಾವ್ ಅವರುಗಳ ಆಶೀರ್ವಾದದ ಬಲದಿಂದ ಅಭಿವೃದ್ಧಿ ಹೊಂದಿ ಇಂದು ಒಂದು ಪ್ರತಿಷ್ಠಿತ ವಿದ್ವತ್ ಸಂಸ್ಥೆ ಎಂಬ ಹೆಸರನ್ನು ಗಳಿಸಿದೆ. 'ಶ್ರೀ' ಅವರ ಹೆಸರು ಪ್ರತಿಷ್ಠಾನವನ್ನು ಬೆಳೆಸಿದೆ. ಇವೆಲ್ಲಕ್ಕಿಂತ ಮುಖ್ಯ ವಾಗಿ ಪ್ರತಿಷ್ಠಾನಕ್ಕೆ ಬೆನ್ನೆಲುಬಾಗಿದ್ದ, ಉಸಿರೇ ಆಗಿದ್ದ ಸಂಸ್ಥಾಪಕ ಎಂ. ವಿ. ಸೀತಾರಾಮಯ್ಯನವರ ಸಾಧನೆಯ ಫಲ ಇದೆಂದರೆ ತಪ್ಪಲ್ಲ.

೧

ಪ್ರತಿಷ್ಠಾನ ನಿಷ್ಠೆಯಿಂದ ಸಾಧಿಸಿರುವ ಪಾಂಡಿತ್ಯದ ಕೆಲಸಗಳು ಹಲವು. ಅವುಗಳಲ್ಲಿ ಪ್ರಮುಖವಾದದ್ದು ಮೌಲಿಕ ಪ್ರಕಟನೆಗಳು. ಈ ಅವಧಿಯಲ್ಲಿ ನಲವತ್ತಕ್ಕೂ ಹೆಚ್ಚು ಪ್ರಕಟನೆಗಳನ್ನು ತಂದಿದೆ ಎಂದರೆ ಸಾಮಾನ್ಯದ ಸಾಧನೆಯಲ್ಲ. ಗ್ರಂಥ ಸಂಪಾದನೆ, ಸಂಶೋಧನೆ, ಪಾಂಡಿತ್ಯದ ಕ್ಷೇತ್ರದಲ್ಲಿ ಗಟ್ಟಿಯಾಗಿ ನಿಲ್ಲುವಂಥ 'ಮಣಿಹ', 'ಶ್ರೀನಿಧಿ', 'ಶ್ರೀಕೃಷ್ಣ ಬಾಲಲೀಲೆ', 'ಕುಮಾರವ್ಯಾಸ ಭಾರತ ಸಂಗ್ರಹ' ಮುಂತಾದ ಬೃಹತ್ ಗ್ರಂಥಗಳನ್ನು ಪ್ರತಿಷ್ಠಾನ ಪ್ರಕಟಿಸಿದೆ.

ವಿಚಾರ ಗೋಷ್ಠಿಗಳೂ ಪ್ರತಿಷ್ಠಾನದ ಇನ್ನೊಂದು ಪ್ರಮುಖ ಕಾರ್ಯ ಕ್ಷೇತ್ರ. ಭಾರತದಲ್ಲೇ ಮೊಟ್ಟಮೊದಲ ಬಾರಿಗೆ 'ಹಸ್ತಪ್ರತಿಶಾಸ್ತ್ರ'ದ ಬಗೆಗೆ

ನಡೆಸಿದ ವಿಚಾರ ಗೋಷ್ಠಿ ದಾಖಲಿಸುವಂತಹದು. ವಿಜಯನಗರ ಇತಿಹಾಸದ ಮೇಲೆ ಬೆಳಕುಚೆಲ್ಲುವ 'ಸಂಗಮರ ಕಾಲದ ವಿಜಯನಗರ' ಪ್ರತಿಷ್ಠಾನ ನಡೆಸಿದ ಇನ್ನೊಂದು ಪ್ರಮುಖ ವಿಚಾರಗೋಷ್ಠಿ. ಕನ್ನಡ ಸಾಹಿತ್ಯದಲ್ಲಿ ಅದ್ವೈತ, ಭಾವೈಕ್ಯ, ಮುಂತಾದ ಗೋಷ್ಠಿಗಳನ್ನು ನಡೆಸಿ ಅವುಗಳನ್ನು ಅದೇ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ದಾಖಲಿಸಿದೆ.

ಬಿ. ಎಂ. ಶ್ರೀ. ಜನ್ಮ ಶತಮಾನೋತ್ಸವವನ್ನು ನಾಡಿನಾದ್ಯಂತ ಏಕೆ, ರಾಷ್ಟ್ರದಲ್ಲೆಲ್ಲ ಆಚರಿಸಿ ಶ್ರೀಯವರ ಹೆಸರನ್ನು ಚಿರಸ್ಥಾಯಿಗೊಳಿಸಿದ ಕೀರ್ತಿ ಪ್ರತಿಷ್ಠಾನದ್ದು. ಹಾಗೆಯೇ ಹಳಕಟ್ಟಿ, ಡಿ.ವಿ.ಜಿ., ಟಿ. ಎಸ್. ವೆಂಕಣ್ಣಯ್ಯ ಮುಂತಾದ ಮಹನೀಯರ ಜನ್ಮ ಶತಾಬ್ದಿಗಳನ್ನು ಸೂಕ್ತ ರೀತಿಯಲ್ಲಿ ಆಚರಿಸಿ ಮಾರ್ಗದರ್ಶಕವಾಯಿತು.

ಪ್ರಾಚೀನ ಹಸ್ತಪ್ರತಿಗಳ ಸಂಗ್ರಹಣ, ಸಂರಕ್ಷಣೆ, ಪ್ರಕಟನೆ ಪ್ರತಿಷ್ಠಾನದ ಬಹುಮುಖ್ಯ ಕಾರ್ಯ. ಸುಮಾರು 1000 ಹಸ್ತಪ್ರತಿಗಳನ್ನು ಸಂಗ್ರಹಿಸಿ ಅವುಗಳನ್ನು ವೈಜ್ಞಾನಿಕವಾಗಿ ಸಂರಕ್ಷಿಸಲು ಪ್ರಯತ್ನಿಸುತ್ತಿದೆ. ಕೇಂದ್ರ ಸರ್ಕಾರದ ಧನ ಸಹಾಯದಿಂದ ಪ್ರತಿವರ್ಷ 2-3 ಅಪ್ರಕಟಿತ ಕೃತಿಗಳನ್ನು ಸಂಪಾದಿಸಿ ಪ್ರಕಟಿಸುತ್ತಿದೆ.

ಇವುಗಳ ಜೊತೆಗೆ ಹಲವರು ಮಹನೀಯರ ಹೆಸರಿನಲ್ಲಿ ದತ್ತಿಗಳನ್ನು ಪಡೆದು ವಿವಿಧ ವಿಷಯಗಳ ಬಗ್ಗೆ ಉಪನ್ಯಾಸಗಳನ್ನೂ ನಡೆಸುತ್ತ ಬಂದಿದೆ. ಹೀಗೆ ಹತ್ತು ಹಲವು ಕಾರ್ಯಕ್ಷೇತ್ರಗಳಲ್ಲಿ ಚಟುವಟಿಕೆಯಿಂದ ದುಡಿಯುತ್ತಿರುವ ಪ್ರತಿಷ್ಠಾನದ ಹೆಸರು ಶಾಶ್ವತವಾಗಿರುವುದು ಅದು ಪ್ರಕಟಿಸುತ್ತಿರುವ 'ಕರ್ನಾಟಕ ಲೋಚನ' ಎಂಬ ಅರ್ಧವಾರ್ಷಿಕ ವಿದ್ವತ್ ಪತ್ರಿಕೆಯಿಂದ. ಸಂಶೋಧನೆಗೆ ಮೀಸಲಾದ ನಿಯತವಾಗಿ ಬರುತ್ತಿರುವ ಏಕೈಕ ಪತ್ರಿಕೆ ಎಂಬ ಹೆಗ್ಗಳಿಕೆಗೆ ಇದು ಪಾತ್ರವಾಗಿದೆ.

ಎಂ.ವಿ. ಸೀತಾರಾಮಯ್ಯನವರ ಬಹುಶ್ರುತವಾದ ಪಾಂಡಿತ್ಯ, ಪ್ರತಿಭೆ, ಪರಿಶ್ರಮಗಳಿಂದ ಬೆಟ್ಟದಂತೆ ಬೆಳೆದ ಪ್ರತಿಷ್ಠಾನ ತನ್ನ ದಶಮಾನೋತ್ಸವ

ರಣೆಗಾಗಿ 'ದಶಮಾನೋತ್ಸವ ಸ್ಮೃತಿ ಮಾಲೆ'ಯಲ್ಲಿ ವಿಚಾರಕ್ಕೆ, ಪಾಂಡಿತ್ಯಕ್ಕೆ ಬಂಧಿಸಿದ ಹತ್ತು ಮೌಲಿಕ ಕೃತಿಗಳನ್ನು ಪ್ರಕಟಿಸುವ ಯೋಜನೆಯನ್ನು ಹಮ್ಮಿ ಂಡಿತ್ತು. ಸೀತಾರಾಮಯ್ಯನವರಿದ್ದಾಗಲೇ ಸಿದ್ಧಗೊಂಡ ಈ ಯೋಜನೆ ಗ ಫಲ ಕೊಡುತ್ತಿದೆ. ಇದನ್ನೂ ಕಾಣುವ ಭಾಗ್ಯ ಅವರಿಗಿಲ್ಲವಾದದ್ದು ನಮ್ಮ ರ್ಭಾಗ್ಯ.

ಈಗಾಗಲೆ ಈ ಮಾಲೆಯಲ್ಲಿ ನಾಲ್ಕು ಪುಸ್ತಕಗಳು ಪ್ರಕಟಗೊಂಡಿವೆ. ನ್ನೂ ಆರು ಪುಸ್ತಕಗಳು ಬರಬೇಕಾಗಿವೆ. ವಿದ್ವಾಂಸ ಮಿತ್ರರ ಸಹಕಾರದಿಂದಷ್ಟೆ ಂಥ ಯೋಜನೆಗಳನ್ನು ಪೂರ್ಣಗೊಳಿಸಲು ಸಾಧ್ಯ. ಒಂದು ವರ್ಷದ ಈ ೋಜನೆ ಎರಡು-ಮೂರು ವರ್ಷವಾದರೂ ಮುಗಿದಿಲ್ಲದಿರುವಾಗ ಪ್ರತಿಷ್ಠಾನ ಂಥ ಸಂಸ್ಥೆಗಳು ಹೊಸ ಹೊಸ ಯೋಜನೆಗಳನ್ನು ಹಮ್ಮಿಕೊಳ್ಳುವುದೇ ಕಷ್ಟ ಾಗುತ್ತದೆ. ಈ ವರ್ಷದಲ್ಲಾದರೂ ಈ ಯೋಜನೆ ಪೂರ್ಣಗೊಳ್ಳುತ್ತದೆಂಬ ರವಸೆ ನಮಗಿದೆ.

ಪ್ರತಿಷ್ಠಾನ ಇಷ್ಟೆಲ್ಲ ಕೆಲಸಗಳನ್ನು ಮಾಡಲು ಶಾಶ್ವತವಾದ ಹಣ ಸಂಗ್ರಹ ಲ್ಲದಿದ್ದರೂ ತತ್ಕಾಲಕ್ಕೆ ಆಯಾ ಯೋಜನೆಗಳಿಗೆ ಸರ್ಕಾರ ಮತ್ತು ಸಾರ್ವಜನಿಕ ಂದ ಹೇಗೋ ಸಂಗ್ರಹವಾಗಿ ಕಾರ್ಯನೆರವೇರುತ್ತದೆ. ಪ್ರತಿಷ್ಠಾನಕ್ಕೆ ವಿವಿಧ ುದ್ದೇಶಗಳಿಗಾಗಿ ಹಣ ನೀಡಿರುವ ಕೇಂದ್ರ ರಾಜ್ಯ ಸರ್ಕಾರಗಳಿಗೆ, ಸಂಘ, ಸಂಸ್ಥೆ ಾರ್ವಜನಕರಿಗೆ ಪ್ರತಿಷ್ಠಾನ ಯಾವತ್ತೂ ಋಣಿಯಾಗಿರುತ್ತದೆ. ಆ ಋಣವನ್ನು ಾಹಿತ್ಯಕ ಚಟುವಟಿಕೆಗಳನ್ನು ಮಾಡುವುದರ ಮೂಲಕ ತೀರಿಸಲು ಬದ್ಧ ಾಗಿರುತ್ತದೆ.

೨

ಪ್ರಸ್ತುತ ಪುಸ್ತಕ 'ಹಸ್ತಪ್ರತಿಶಾಸ್ತ್ರ ಪರಿಚಯ' ಒಂದು ವಿಶಿಷ್ಟ ಿಷಯವನ್ನು ಪ್ರತಿಪಾದಿಸುವ ಗ್ರಂಥ. 'ಹಸ್ತಪ್ರತಿಶಾಸ್ತ್ರ' ಎನ್ನುವುದು ಹೊಸ ಳಕೆ. ಯಾವುದೇ ಇಂಗ್ಲಿಷ್ ನಿಘಂಟಿನಲ್ಲೂ ಈ ಪದದ ಬಳಕೆ ಇಲ್ಲ. ಈ

ಪದವನ್ನು ಚಲಾವಣೆಗೆ ತಂದ ಕೀರ್ತಿ ಪ್ರತಿಷ್ಠಾನದ್ದೇ. 1982ರಲ್ಲಿ ಪ್ರತಿಷ್
ನಡೆಸಿದ ಇದೇ ಹೆಸರಿನ ವಿಚಾರಗೋಷ್ಠಿಯಿಂದ ಈ ಪದ - ಅರ್ಥ-ವ
ಬೆಳಕಿಗೆ ಬಂತು. ಈಗಾಗಲೆ 'ಗ್ರಂಥ ಸಂಪಾದನಾ ಶಾಸ್ತ್ರ' ಇದೆ. ಇದ
ಹಸ್ತಪ್ರತಿಶಾಸ್ತ್ರದ ವ್ಯಾಪ್ತಿ ಒಳಗೊಂಡಿದೆಯಾದರೂ ಇದನ್ನೇ ಪ್ರತ್ಯೇಕಿಸಿ ಒ
ಸ್ವತಂತ್ರ ಶಾಸ್ತ್ರವನ್ನಾಗಿ ಅಭ್ಯಾಸಮಾಡುವ ಅಗತ್ಯವನ್ನು ಪ್ರತಿಷ
ಗುರುತಿಸಿದೆ. ಗ್ರಂಥ ಸಂಪಾದನೆಗೆ ಹಸ್ತಪ್ರತಿಯೊಂದನ್ನೂ ಸಿದ್ಧಪಡಿ
ವವರೆಗಿನ ಕೆಲಸ ಹಸ್ತಪ್ರತಿಶಾಸ್ತ್ರದ್ದು. ಹಸ್ತಪ್ರತಿಗಳನ್ನು ಎಲ್ಲರೂ ಸಂಪಾ
ಲಾಗುವುದಿಲ್ಲ. ಆದರೆ ಸಂರಕ್ಷಿಸಬಲ್ಲರು, ಸಂಗ್ರಹಿಸಬಲ್ಲರು. ಇದೇ ಅಗತ್ಯವ
ಆಗಬೇಕಾದುದೂ ಕೂಡ. ಎಷ್ಟು ಹೆಚ್ಚು ಜನರಿಗೆ ಈ ಬಗ್ಗೆ ತಿಳುವ
ಮೂಡುತ್ತದೋ ಅಷ್ಟೂ ಹೆಚ್ಚು ಹಸ್ತಪ್ರತಿಗಳು ಸಂರಕ್ಷಿಸಲ್ಪಡುತ್ತವೆ.

ಪ್ರತಿಷ್ಠಾನ ಈ ಬಗ್ಗೆ ವ್ಯವಸ್ಥಿತವಾದ ಶಿಕ್ಷಣವನ್ನು ನೀಡುವ ತರಗ
ಗಳನ್ನೂ ನಡೆಸುತ್ತಿದೆ. ಭಾರತದಲ್ಲಿ ಈ ಬಗ್ಗೆ ಶಿಕ್ಷಣ ಆರಂಭಿಸಿರುವುದರಲ್ಲಿಯ
ಪ್ರತಿಷ್ಠಾನವೇ ಮೊದಲನೆಯದೆಂಬುದು ಸದ್ಯದ ತಿಳುವಳಿಕೆ. 1990 ರಿಂ
ಈ ಶಿಕ್ಷಣವನ್ನು ನೀಡಲಾಗುತ್ತಿದೆ.

ಭಾರತೀಯ ಪ್ರಾಚೀನ ಸಾಹಿತ್ಯದ ಬಹುಪಾಲು ಹಸ್ತಪ್ರತಿಗಳಲ್ಲೇ ನಿಹಿ
ವಾಗಿರುವುದು ಸರ್ವವೇದ್ಯವಾದುದು. ಮುದ್ರಣ ಸೌಲಭ್ಯವಿಲ್ಲದಿದ್ದ ಹಿಂದಿನ
ಕಾಲದಲ್ಲಿ ಸಾಹಿತ್ಯಕೃತಿಗಳೆಲ್ಲ ತಾಳೆಗರಿಗಳಲ್ಲಿ, ಭೂರ್ಜಪತ್ರಗಳಲ್ಲಿ, ಕಡತಗಳಲ್ಲಿ
ಅಡಗಿದ್ದುವು. ಈ ಹಸ್ತಪ್ರತಿಗಳನ್ನು ಸಂರಕ್ಷಿಸುವುದು ತುಂಬ ಪ್ರಯಾಸದ ಕೆಲಸ.
ಕ್ರಿಮಿ ಕೀಟಗಳಿಂದ ಇವನ್ನು ಕಾಪಾಡಿಕೊಂಡು ಬರುವುದು ಮತ್ತೂ ದುಸ್ತರದ
ಕೆಲಸ.

ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರಲು ನಮ್ಮ ಪ್ರಾಚೀನರು ಹಲವು
ವಿಧಿ ವಿಧಾನಗಳನ್ನು ಅನುಸರಿಸುತ್ತಿದ್ದರು. ಹಸ್ತಪ್ರತಿಗಳನ್ನು ಮೇಲಿಂದಮೇಲೆ
ಶುದ್ಧಿ ಮಾಡುವುದರ ಜೊತೆಗೆ ಕ್ರಿಮಿನಾಶಕ ತೈಲವನ್ನು ಲೇಪಿಸಿ ಅವನ್ನು
ಸಂರಕ್ಷಿಸುತ್ತಿದ್ದರು. ವೈಜ್ಞಾನಿಕ ರಕ್ಷಣೋಪಾಯ ವಿಧಾನಗಳು ಬೆಳಕಿಗೆ ಬಾರ

ಸುದಕ್ಕೆ ಮೊದಲು ಹಸ್ತಪ್ರತಿಗಳನ್ನು ಅತ್ಯಂತ ಪ್ರಯಾಸದಿಂದ ಸಂರಕ್ಷಿಸಿಕೊಂಡು ಬಂದಿರುವುದರಿಂದಲೇ ಇಂದು ನಾವು ಅನೇಕ ಪ್ರಾಚೀನ ಕೃತಿಗಳನ್ನು ಸಂಪಾದಿಸಿ ಪ್ರಕಟಿಸುವುದು ಸಾಧ್ಯವಾಯಿತೆಂಬುದು ನಿರ್ವಿವಾದ.

'ಗ್ರಂಥ ಸಂಪಾದನೆ'ಗೆ ಹಸ್ತಪ್ರತಿಗಳು ಶುದ್ಧವಾಗಿರುವುದಷ್ಟೇ ಅಲ್ಲದೆ ಚೊಕ್ಕವಾಗಿಯೂ ಇರಬೇಕಾದುದು ಅತ್ಯಗತ್ಯ. ಹಸ್ತಪ್ರತಿಗಳು ಧೂಳು ಕೊಳೆ ಯಿಂದ ಕೂಡಿ ಓದಲು ಕಠಿನವಾದರೆ ಶುದ್ಧ ಪಾಠಗಳನ್ನು ಕಂಡುಹಿಡಿಯಲು ದುಸ್ತರವಾಗುತ್ತದೆ. ಗ್ರಂಥ ಸಂಪಾದನಾ ಶಾಸ್ತ್ರದ ದೃಷ್ಟಿಯಿಂದ ಹಸ್ತಪ್ರತಿಗಳು ಶುದ್ಧವಾಗಿಯೂ ಸ್ವಚ್ಛವಾಗಿಯೂ ಲಭ್ಯವಾಗುವಂತಿರಬೇಕು. ಅದಕ್ಕಾಗಿ 'ಹಸ್ತಪ್ರತಿಶಾಸ್ತ್ರ'ದ ತಿಳುವಳಿಕೆಯ ಅಗತ್ಯ ಇಂದು ಮುಖ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಹಸ್ತಪ್ರತಿಶಾಸ್ತ್ರವನ್ನು ಒಂದು ಪ್ರತ್ಯೇಕ ಶಾಖೆಯನ್ನಾಗಿ, ಪ್ರತ್ಯೇಕ ಶಾಸ್ತ್ರವನ್ನಾಗಿ ರೂಪಿಸುವುದಕ್ಕಾಗಿ ಈ ಗ್ರಂಥವನ್ನು ಅದರ ಮೊಟ್ಟ ಮೊದಲ ಕ್ರಮಬದ್ಧವಾದ ಶಾಸ್ತ್ರಗ್ರಂಥವನ್ನಾಗಿ ಹೊರತರುವ ಉದ್ದೇಶ ಪ್ರತಿಷ್ಠಾನದ್ದಾಗಿತ್ತು.

ಅದಕ್ಕೆ ಅನುಗುಣವಾಗಿ ಗ್ರಂಥದಲ್ಲಿ ಲೇಖನವಸ್ತುಗಳು, ಹಸ್ತಪ್ರತಿ ಸ್ವರೂಪ ಮತ್ತು ವಿಂಗಡಣೆ, ಸಂಗ್ರಹ, ಹಸ್ತಪ್ರತಿ ಸೂಚಿಗಳು, ಹಸ್ತಪ್ರತಿಸಂರಕ್ಷಣೆ, ನಿವಾರಣೋಪಾಯಗಳು, ಪರಿಚಲನೆ, ಅಕ್ಷರ ಸ್ಖಾಲಿತ್ಯಗಳು, ಗ್ರಂಥಸಂಪಾದನೆಗೆ ಹಸ್ತಪ್ರತಿ ತಯಾರಿಕೆ, ಪಾಠ ಪರಿಷ್ಕರಣ, ಕೇಂದ್ರ ಹಸ್ತಪ್ರತಿ ಭಂಡಾರ ಎಂಬ ಶೀರ್ಷಿಕೆಗಳಿವೆ. ಈ ಗ್ರಂಥದ ಲೇಖಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಬಹುವರ್ಷಗಳ ಕಾಲ ಹಸ್ತಪ್ರತಿಗಳ ಸಂಗ್ರಹಣೆ, ಸಂರಕ್ಷಣೆ, ಗ್ರಂಥ ಸಂಪಾದನೆ– ಈ ಕಾರ್ಯದಲ್ಲೇ ನಿರತರಾಗಿ ಅಪಾರ ಅನುಭವವನ್ನು ಪಡೆದಿದ್ದಾರೆ. ಅಲ್ಲದೆ ಈ ಕ್ಷೇತ್ರದಲ್ಲಿ ಈವರೆಗೆ ಪ್ರಕಟವಾಗಿರುವ ಎಲ್ಲ ಗ್ರಂಥಗಳನ್ನೂ ಪರಿಶೀಲಿಸಿ ಅಗತ್ಯ ಮಾಹಿತಿಯನ್ನು ಸಂಗ್ರಹಿಸಿಕೊಂಡಿದ್ದಾರೆ. ಸಂದರ್ಭೋಚಿತವಾಗಿ ಗ್ರಂಥ ಭಾಗಗಳನ್ನೂ ಉದ್ಧರಿಸಿದ್ದಾರೆ. ಹಸ್ತಪ್ರತಿ ಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲ ವಿವರ ಗಳನ್ನೂ ಕೂಲಂಕಷವಾಗಿ ಈ ಕೃತಿಯಲ್ಲಿ ವಿವರಿಸಿದ್ದಾರೆ. ಈ ಶಾಸ್ತ್ರವನ್ನು ಅಭ್ಯಾಸಮಾಡುವವರಿಗೆ ಇದು ಒಂದು ಕೈದೀವಿಗೆಯಾಗಬಹುದು ಎಂದು ನಾನು ನಂಬಿದ್ದೇನೆ.

ಈ ಉಪಯುಕ್ತ ಕೃತಿಯನ್ನು ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾ
ಬರೆದುಕೊಟ್ಟ ಶ್ರೀ ಬಿ. ಎಸ್. ಸಣ್ಣಯ್ಯನವರನ್ನು ಅಭಿನಂದಿಸುತ್ತ ಕೃ
ಗಳನ್ನರ್ಪಿಸುತ್ತೇನೆ. ಈ ಗಂಥದ ಕರಡಚ್ಚನ್ನು ತಿದ್ದಿ ಸಹಕ
ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್ ಅವರನ್ನೂ ಅಂದವಾಗಿ ಮು
ಕೊಟ್ಟ ನೇತ್ರಾ ಪ್ರಿಂಟರ್ಸ್‌ನ ಶ್ರೀ ಮುನಿಧರ್ಮಯ್ಯ ಅವರನ್ನೂ ಕೃತ
ಯಿಂದ ಸ್ಮರಿಸುತ್ತೇನೆ.

ವಿಶೇಷವಾಗಿ ಈ ಗ್ರಂಥದ ಅರ್ಧಭಾಗದ ಶ್ರೇಯಸ್ಸು ದಿವಂ
ಎಂ. ವಿ. ಸೀತಾರಾಮಯ್ಯನವರಿಗೆ ಸಲ್ಲಬೇಕು. ಅವರು ಇದ್ದಾಗ ಸಿದ್ಧ
ಯೋಜನೆಗೆ ಅವರೇ ಶ್ರಮವಹಿಸಿ ಸರ್ಕಾರದಿಂದ ಐವತ್ತು ಸಾವಿರ ರೂ
ಅನುದಾನವನ್ನು ಪಡೆದಿದ್ದರು. ಅವರ ನಂತರ ಪ್ರತಿಷ್ಠಾನದ ಅಧ್ಯಕ್ಷರ
ಮುಂದುವರೆದ ಪೂಜ್ಯ ಗುರುಗಳಾದ ಪ್ರೊ. ಎಲ್. ಎಸ್. ಶೇಷಗಿರಿರಾ
ಅವರು ಈ ಯೋಜನೆಗಾಗಿ ಇನ್ನು ಐವತ್ತು ಸಾವಿರ ರೂಗಳನ್ನು ಸರ್ಕಾರದಿ
ಪಡೆದಿದ್ದರು. ಹಾಗೂ ಪುಸ್ತಕಗಳನ್ನು ಬರೆಯಲು ವಿದ್ವಾಂಸರನ್ನು ಒಪ್ಪಿಸಿದ್ದರ
ಹೀಗಾಗಿ ಉಳಿದರ್ಧ ಭಾಗದ ಶ್ರೇಯಸ್ಸು ಅವರಗೆ ಸಲ್ಲತಕ್ಕದ್ದು. ಈ ಸಂದರ್ಭ
ದಲ್ಲಿ ದಿವಂಗತರನ್ನು ಸ್ಮರಿಸುತ್ತ ಶೇಷಗಿರಿರಾವ್ ಅವರಿಗೆ ಮತ್ತು ಅನುದಾ
ನೀಡಿರುವ ಸರ್ಕಾರಕ್ಕೆ ಕೃತಜ್ಞತೆಗಳನ್ನರ್ಪಿಸುವುದು ನನ್ನ ಕರ್ತವ್ಯವೆಂ
ಕೊಂಡಿದ್ದೇನೆ.

ಕನ್ನಡ ಜನತೆ ಈ ಕೃತಿಯ ಉಪಯೋಗವನ್ನು ಪಡೆದುಕೊಳ್ಳುವರೆಂದು
ಆಶಿಸಿದ್ದೇನೆ.

**ಎನ್. ಬಸವಾರಾಧ್ಯ**

ಅಧ್ಯಕ್ಷರು

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

# ಲೇಖಕರ ಮಾತು

ಪ್ರಾಚೀನ ಸಾಹಿತ್ಯ ಸಂಪಾದನೆಗೆ **ಹಸ್ತಪ್ರತಿ ಶಾಸ್ತ್ರದ ಪರಿಚಯ** ಅತ್ಯಂತ ಅವಶ್ಯಕವೂ ಅನಿವಾರ್ಯವೂ ಆಗಿದೆ ಎಂಬುದನ್ನು ಈ ಕ್ಷೇತ್ರದಲ್ಲಿ ಕೆಲಸ ಮಾಡುವವರು ಮಾತ್ರ ಬಲ್ಲರೇ ಹೊರತು ಉಳಿದವರಿಗೆ ಇದರ ಅವಶ್ಯ ಕತೆಯೇ ಕಂಡುಬರುವುದಿಲ್ಲ. ಅಲ್ಲದೆ ಸಾಹಿತ್ಯದಲ್ಲಿಯೇ ಅನಾಸಕ್ತಿ ಹೊಂದಿದವರಿಗೆ ಸಾಹಿತ್ಯ ಕೃತಿಗಳೇ ಬೇಕಾಗಿರುವುದಿಲ್ಲ. ಆದರೆ ಸಾಹಿತ್ಯಾಸಕ್ತರೂ ಪ್ರಾಚೀನ ಸಾಹಿತ್ಯಾಭಿಮಾನಿಗಳೂ ಆಗಿದ್ದ ದಿ॥ ಶ್ರೀಯುತ ಎಂ. ವಿ. ಸೀತಾರಾಮಯ್ಯನವರಂತಹ ವ್ಯಕ್ತಿಗಳು ಇನ್ನೂ ಇರುವುದರಿಂದ ಇಂತಹ ಕೃತಿಗಳು ಹೊರಬರುತ್ತಿವೆ. ಇವರಿಂದ ಜನ್ಮತಳೆದ ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನವು ಉತ್ತಮ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕೆಲಸ ಮಾಡುತ್ತಿದೆ. ಅದರ ಫಲವಾಗಿ ಪ್ರತಿಷ್ಠಾನದ ಹಲವು ಕೃತಿಗಳ ಸಾಲಿನಲ್ಲಿ ನನ್ನದೊಂದು ಸೇರ್ಪಡೆಯಾಗಿದೆ ; ದಿ॥ ಡಿ. ಎಲ್. ನರಸಿಂಹಾಚಾರ್, ದಿ॥ ಎಚ್. ದೇವೀರಪ್ಪ, ಡಾ॥ ಎಂ. ಎಂ. ಕಲಬುರ್ಗಿ, ಶ್ರೀ ಸೀತಾರಾಮ ಜಾಗೀರದಾರ ಮೊದಲಾದವರು ಮಾಡಿರುವ ಈ ಕಾರ್ಯಕ್ಷೇತ್ರಕ್ಕೆ ನನ್ನ ಸೇವೆಯೂ ಸಂದಂತಾಗಿದೆ.

ಈ ಕೃತಿಯು ಹೊರಬರಲು ಕಾರಣಕರ್ತರಾದ ಪ್ರೊ. ಎಲ್. ಎಸ್. ಶೇಷಗಿರಿರಾಯರು ಮತ್ತು ಶ್ರೀ ಎನ್. ಬಸವಾರಾಧ್ಯರು ಮತ್ತು ಪ್ರತಿಷ್ಠಾನದ ಇತರ ಎಲ್ಲ ಕಾರ್ಯಕರ್ತರಿಗೆ ನನ್ನ ಕೃತಜ್ಞತೆಗಳು.

**ಬಿ. ಎಸ್. ಸಣ್ಣಯ್ಯ**

33/1, 8ನೇ ಅಡ್ಡ ರಸ್ತೆ
ಜಯಲಕ್ಷ್ಮೀಪುರಂ
ಮೈಸೂರು–570 012

# ಪರಿವಿಡಿ

# ಹಸ್ತಪ್ರತಿಶಾಸ್ತ್ರ

ಮಾನವನ ಬುದ್ಧಿಯ ಬೆಳವಣಿಗೆಯನ್ನು ಮೂರು ಮುಖ್ಯ ಹಂತಗಳನ್ನಾಗಿ ವಿಭಾಗಿಸಬಹುದು. ಅವಾವುವೆಂದರೆ ಮಾತನಾಡುವಿಕೆ, ರೇಖಾಚಿತ್ರಗಳನ್ನು ಬರೆಯುವಿಕೆ ಮತ್ತು ಬಣ್ಣದ ಚಿತ್ರಗಳನ್ನು ಬಿಡಿಸುವಿಕೆ. ಮಾತನಾಡಲು ಕಲಿತನಂತರ ಚಿತ್ರೀಕರಣ ಪ್ರಾರಂಭವಾಯಿತೊ, ಮಾತನಾಡಲು ಬಾರದಿದ್ದಾಗ ತಮ್ಮ ಅಭಿವ್ಯಕ್ತಿಯನ್ನು ಮತ್ತೊಬ್ಬರಿಗೆ ವಿಶದಪಡಿಸಲು ರೇಖಾಚಿತ್ರಗಳನ್ನು ಬರೆದು ತೋರುವುದರ ಮೂಲಕ ಆರಂಭವಾಯಿತೊ ಎಂಬುದು ಇಲ್ಲಿ ಪ್ರಕೃತವಲ್ಲ. ಮಾನವನು ಕಲಿತ ಮಾತನ್ನು, ಹೊಳೆದ ಭಾವವನ್ನು, ಆದ ಅನುಭವವನ್ನು ಬರೆದಿಡಲು ಪ್ರಯತ್ನಿಸಿದನು. ಕಾಲದಿಂದ ಕಾಲಕ್ಕೆ, ಒಂದೆಡೆಯಿಂದ ಮತ್ತೊಂದೆಡೆಗೆ ತಮ್ಮ ಅಭಿಪ್ರಾಯಗಳನ್ನು ಕಾಯ್ದಿಡುವಲ್ಲಿ ಅಥವಾ ವಿನಿಮಯ ಮಾಡಿಕೊಳ್ಳುವಲ್ಲಿ, ಒಂದು ವಿಷಯವನ್ನು ಹಲವು ಜನ ಓದಿ ತಿಳಿಯುವಲ್ಲಿ ಬರವಣಿಗೆಯ ಸಾಧನ ಬಂದು ಸೇರಿತು. ರಾಜ ಮಹಾರಾಜರುಗಳು ತಾವು ಮಾಡಿದ ಕಾಯಿದೆ ಕಟ್ಟಳೆಗಳನ್ನು ದಾನಧರ್ಮಾದಿಗಳನ್ನು ಶಾಶ್ವತವಾಗಿರಿಸುವಲ್ಲಿ ಬರವಣಿಗೆಯ ಅವಶ್ಯಕತೆಯುಂಟಾಯಿತು. ಈ ಎಲ್ಲ ಪ್ರಯತ್ನದ ಫಲವಾಗಿ ವಿವಿಧ ರೂಪದ ವಸ್ತುಗಳಲ್ಲಿ ಬರವಣಿಗೆ ರೂಪುಗೊಂಡಿತು. ಹೀಗೆ ಯಾವುದೇ ವಸ್ತುವಿನ ಮೇಲೆ ಕೈಯಿಂದ ಬರೆದ ಕೃತಿಗೆ ಅಥವಾ ಕೃತಿಯ ಭಾಗಕ್ಕೆ 'ಹಸ್ತಪ್ರತಿ' ಎನ್ನಬಹುದು. ಈ ಹಸ್ತಪ್ರತಿಗಳ ಹುಟ್ಟು, ಬೆಳವಣಿಗೆ, ಸ್ವರೂಪ, ಮಹತ್ವ, ಸಂಗ್ರಹ, ಸಂರಕ್ಷಣೆ, ಸಂಪಾದನೆ, ಪ್ರಕಟಣೆ ಮೊದಲಾದೆಲ್ಲ ಅಂಶಗಳನ್ನೂ ಒಳಗೊಂಡಿರುವುದೇ 'ಹಸ್ತಪ್ರತಿ ಶಾಸ್ತ್ರ'ವಾಗುತ್ತದೆ.

"ಹಸ್ತಪ್ರತಿ ಶಾಸ್ತ್ರ (Manuscriptology) ಎಂಬ ಪಾರಿಭಾಷಿಕ ಶಬ್ದ ಈವರೆಗೆ ವಿಶೇಷವಾಗಿ ಬಳಕೆಯಲ್ಲಿದ್ದುದು ನನ್ನ ಗಮನಕ್ಕೆ ಬಂದಿಲ್ಲ. ವ್ಯಾಪಕಾರ್ಥದ ಪದ ಇದು. ಹಸ್ತಪ್ರತಿಗಳ ಸಂಗ್ರಹಕಾರ್ಯದಿಂದ ಅದು ಮೊದಲಾಗುತ್ತದೆ. ಸಂಗ್ರಹಿಸಿದ ಹಸ್ತಪ್ರತಿಗಳನ್ನು ಜೋಪಾನ ಮಾಡುವುದು,

ಸಂಗ್ರಹಕಾರ್ಯ ಒಂದು ಹಂತವನ್ನು ಮುಟ್ಟಿದ ಮೇಲೆ ಹಸ್ತಪ್ರತಿಗಳ ಸ
ಯನ್ನು ತಯಾರಿಸುವುದು, ಇವೂ ಹಸ್ತಪ್ರತಿ ಶಾಸ್ತ್ರದ ಅಂಗವೇ. ಹಸ್ತ
ರೂಪದ ಕೃತಿಯನ್ನು ಪರಿಷ್ಕರಿಸಿ ಕವಿಪಾಠಕ್ಕೆ ಸಮೀಪತಮವಾದ ಪಾಠವ
ಸಕಲ ವಿದ್ವತ್ ಪರಿಕರಗಳೊಂದಿಗೆ ಪ್ರಕಟಿಸುವುದರಲ್ಲಿ ಈ ಶಾಸ್ತ್ರ ತನ್ನ ಕಡೆ
ಹಂತವನ್ನು ಮುಟ್ಟುತ್ತದೆ, ಎಂದು ನಾನು ತಿಳಿದಿದ್ದೇನೆ. ಗ್ರಂಥಸಂಪಾದ
ಶಾಸ್ತ್ರ (Textual criticism) ಹಸ್ತಪ್ರತಿ ಶಾಸ್ತ್ರದಲ್ಲಿಯೇ ಸಮಾವೆ
ಗೊಳ್ಳುತ್ತದೆ ಎಂದು ನನ್ನ ಭಾವನೆ. ಒಂದು ಪೂರ್ವಕಾಂಡ, ಇನ್ನೊಂದ
ಉತ್ತರಕಾಂಡ"1 ಎಂದು ಎಂ. ವಿ. ಸೀತಾರಾಮಯ್ಯನವರು ಹೇಳಿರುವ ಮಾತ
ಮನನೀಯವಾದುದು.

ಇಲ್ಲಿ ಹೇಳಿರುವ ಹಸ್ತಪ್ರತಿಶಾಸ್ತ್ರದ ಬಗೆಗೆ ಡಿ. ಎಲ್. ನರಸಿಂಹಾಚಾರ್
ಎಂ. ಎಂ. ಕಲಬುರ್ಗಿ, ಸೀತಾರಾಮ ಜಾಗೀರದಾರ್ ಅವರು ತಮ್ಮ ಗ್ರಂಥ
ಗಳಲ್ಲಿ ಕೆಲವು ಮಹತ್ವದ ವಿಷಯಗಳನ್ನು ಮುಂದಿಟ್ಟು ಚರ್ಚಿಸಿದ್ದಾರೆ. ಮತ್ತೆ
ಕೆಲವು ಲೇಖನಗಳು ಅಲ್ಲಿ ಇಲ್ಲಿ ಪ್ರಕಟಗೊಂಡಿವೆ. ನಾನು ಇಲ್ಲಿ ಕೆಲವು ಅಂಶ
ಗಳನ್ನು ನಿರೂಪಿಸಲು ಪ್ರಯತ್ನಿಸುತ್ತೇನೆ.

ಬರವಣಿಗೆಗೆ ಈಗಿನಂತೆ ಕಾಗದ ಲೇಖನಿಗಳು ದೊರೆಯದಿದ್ದಾಗ ತಮ್ಮ
ಕೈಗೆ ಸಿಕ್ಕಿದ ಕೆಲವು ಪದಾರ್ಥಗಳನ್ನು ಬರೆಯುವ ಸಾಧನಗಳನ್ನಾಗಿ ಜನರು
ಬಳಸಿಕೊಂಡರು. ಅವುಗಳಲ್ಲಿ ಮುಖ್ಯವಾದುವೆಂದರೆ ಕಲ್ಲು, ಲೋಹ, ಚರ್ಮ,
ಮರ, ಮರದ ಎಲೆಗಳು, ಸಸ್ಯಪದಾರ್ಥಗಳು. ಜನರು ತಮ್ಮ ಬುದ್ಧಿ
ಸಾಮರ್ಥ್ಯಕ್ಕನುಗುಣವಾಗಿ ಅವುಗಳನ್ನು ವಿವಿಧ ರೀತಿಯಲ್ಲಿ ಹದಗೊಳಿಸಿ
ಬರೆಯಲು ಬಳಸಿಕೊಂಡರು. ಅವುಗಳಲ್ಲಿ ಈಜಿಪ್ಟ್ ದೇಶದ ನದಿ ಪ್ರದೇಶದಲ್ಲಿ
ಬೆಳೆಯುತ್ತಿದ್ದ ಪಪೈರಸ್ (Papyrus) ಎಂಬ ಜೊಂಡು ಜಾತಿಯ ಸಸ್ಯದಿಂದ
ತಯಾರಿಸಿದ ಹಾಳೆಗಳನ್ನು ಯೂರೋಪು ದೇಶಗಳಲ್ಲಿ ಹೆಚ್ಚಾಗಿ ಉಪಯೋಗಿ
ಸಿದರು. ಹೀಗೆ ವಿದೇಶಗಳಲ್ಲಿ ಯಾವ ಯಾವ ವಸ್ತುವನ್ನೋ ಬರವಣಿಗೆಗೆ
ಬಳಸಿರಬಹುದು. ಭಾರತದಲ್ಲಿ ಉಪಯೋಗಿಸಿರುವ ವಸ್ತುಗಳಲ್ಲಿ ತಾಡಪತ್ರ
ಅಥವಾ ತಾಳೆಗರಿ, ಭೂರ್ಜಪತ್ರ ಮತ್ತು ಕಾಗದಗಳು ಹೆಚ್ಚು ವ್ಯಾಪಕವಾಗಿದ್ದು

---

1. ಹಸ್ತಪ್ರತಿಶಾಸ್ತ್ರ, ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರು ೧೯೮೩. ಪು. ೪

ಕೆಲವು ಬರವಣಿಗೆಗಳು ಮಾತ್ರ ಶಿಲೆ, ಲೋಹ, ಚರ್ಮ, ಮಣ್ಣಿನ ಬಿಲ್ಲೆ, ಸ್ಫಟಿಕ, ಮರದ ಹಲಗೆಗಳಲ್ಲಿ ದೊರೆಯುತ್ತವೆ. ಉತ್ತರ ಭಾರತದಲ್ಲಿ ತಾಡಪತ್ರ, ಭೂರ್ಜ ಪತ್ರಗಳು ಉಪಯೋಗವಾಗಿದ್ದರೆ, ದಕ್ಷಿಣದಲ್ಲಿ ಓಲೆ ಅಥವಾ ತಾಳೆಗರಿಗಳು ಬಹು ಪ್ರಸಿದ್ಧಿಯನ್ನು ಪಡೆದಿವೆ. ಭಾರತದಲ್ಲಿ ೧೫ನೇ ಶತಮಾನದ ಹೊತ್ತಿಗೇ ಕಾಗದ ಬಳಕೆ ಬಂದಿರುವುದು ಕಂಡುಬಂದರೂ ಇದು ಸಾಮಾನ್ಯ ಜನತೆಯ ಕೈಗೆ ಸುಲಭವಾಗಿ ದೊರೆಯದೆ ಹೋದುದರಿಂದ ೧೯ನೆಯ ಶತಮಾನದ ಮಧ್ಯ ಭಾಗದವರೆಗೂ ಓಲೆಗಳಲ್ಲಿ ಪ್ರತಿ ಮಾಡಿರುವುದನ್ನು ಕಾಣಬಹುದು. ಕ್ರಮೇಣ ವಾಗಿ ಮೇಣಗಪ್ಪಟ ಅಥವಾ ಕಡತ ಕೋರಿಕಾಗದ ಮತ್ತು ಕಾಗದಗಳನ್ನು ಹಸ್ತಪ್ರತಿಯ ನಕಲಿಗೆ ಉಪಯೋಗಿಸಿರುವುದುಂಟು. ಹೀಗೆ ದೊರೆಯುವ ಬರವಣಿಗೆಯ ವಿವಿಧ ವಸ್ತುಗಳ ಸ್ಥೂಲ ಪರಿಚಯವನ್ನು ಇಲ್ಲಿ ಮಾಡಿಕೊಳ್ಳ ಬಹುದು.



# ಲೇಖನ ವಸ್ತುಗಳು

**ಶಿಲೆ :** ಇದು ದೀರ್ಘಕಾಲ ಬಾಳಿಕೆ ಬರುವಂತಹದೂ ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದಾದಂತಹುದೂ ಆಗಿದೆ. ಇದನ್ನು ಸಾಮಾನ್ಯವಾಗಿ ಶಾಸನಗಳನ್ನೂ ನಿರೂಪಗಳನ್ನೂ ಕೆತ್ತಿಸಲು ಉಪಯೋಗಿಸಲಾಗಿದೆ. ಕ್ವಚಿತ್ತಾಗಿ ಕೆಲವು ಸಾಹಿತ್ಯ ಕೃತಿಗಳೂ ಕೃತಿಭಾಗಗಳೂ ಇದರಲ್ಲಿ ಉತ್ಕೀರ್ಣಗೊಂಡಿರುವುದನ್ನು ಕಾಣಬಹುದು. “ಒಂದು ಪಂಕ್ತಿಯಿಂದ ನೂರಾರು ಪಂಕ್ತಿಗಳಷ್ಟು ಉದ್ದವಾದ ಶಾಸನಗಳಿವೆ. ಅಜಮೀರದಲ್ಲಿ ದೊರೆತ ಎರಡು ಶಿಲಾಪಟ್ಟಗಳ ಮೇಲೆ ಎರಡು ಸಂಸ್ಕೃತ ನಾಟಕಗಳು ಉತ್ಕೀರ್ಣವಾಗಿವೆ. ಹೀಗೆಯೇ ಇನ್ನೊಂದು ನಾಟಕವನ್ನು ಕಡೆದಿರುವ ಶಿಲಾಪಟ್ಟ ಧಾರ್ ನಗರದಲ್ಲಿ ದೊರೆತಿದೆ. ಪುದುಕೋಟೆ ಸೀಮೆಯಲ್ಲಿರುವ ಕುಡಿಮಿಯಾಮಲೈ ಎಂಬ ಬೆಟ್ಟದ ಮೇಲೆ ೭ನೇ ಶತಮಾನದ ತಮಿಳಾಕ್ಷರಗಳಲ್ಲಿ ಸಂಗೀತ ಶಾಸ್ತ್ರದ ಸ್ವರಪ್ರಸ್ತಾರಗಳು ಲಿಖಿತವಾಗಿವೆ.”[1] ಕನ್ನಡದಲ್ಲಿ ಮೊದಲ ಶಿಲಾಲೇಖ ಕಂಡುಬರುವ ಸು. ಕ್ರಿ. ಶ. ೪೫೦ರಲ್ಲಿ ಉತ್ಕೀರ್ಣಗೊಂಡ ಹಲ್ಮಿಡಿಶಾಸನ ನಮಗೆ ದೊರೆತಿರುವ ಮೊದಲ ಶಾಸನವಾದುದರಿಂದ ಇದಕ್ಕೆ ಅತ್ಯಂತ ಮಹತ್ವದ ಸ್ಥಾನವಿದೆ. ಸಾಹಿತ್ಯದ ದೃಷ್ಟಿಯಿಂದ ನೋಡುವುದಾದರೆ ಕ್ರಿ. ಶ. ೧೧೮೦ರಲ್ಲಿ ಉತ್ಕೀರ್ಣಗೊಂಡ ಶ್ರವಣಬೆಳಗೊಳದ ಶಾಸನವೊಂದರಲ್ಲಿ ಕಂಡುಬರುವ ಬೊಪ್ಪಣ ಪಂಡಿತನ ‘ಗೊಮ್ಮಟಜಿನಸ್ತುತಿ’ ಮುಖ್ಯವಾದುದಾಗಿದೆ.

ಲೋಹ ಪದಾರ್ಥಗಳಲ್ಲಿ ಕಬ್ಬಿಣ, ಚಿನ್ನ, ಬೆಳ್ಳಿ, ಹಿತ್ತಾಳೆ, ಕಂಚು, ತಾಮ್ರಗಳ ಮೇಲೆ ಬರೆದಿರುವ ಕೆಲವು ಲಿಖಿತಗಳು ಬಹು ಅಲ್ಪ ಪ್ರಮಾಣದಲ್ಲಿ ನಮಗೆ ದೊರೆಯುತ್ತವೆ.

---

1. ಡಿ. ಎಲ್. ನರಸಿಂಹಾಚಾರ್, ಕನ್ನಡ ಗ್ರಂಥ ಸಂಪಾದನೆ ; ಪು. ೪೦

**ಕಬ್ಬಿಣ :** ಇದು ತುಕ್ಕು ಹಿಡಿಯುವ ವಸ್ತುವಾದುದರಿಂದ ಸಾಧಾರಣವಾಗಿ ಯಾವ ಲಿಖಿತಗಳಿಗೂ ಉಪಯೋಗಿಸುತ್ತಿರಲಿಲ್ಲ. ಬರಹವುಳ್ಳ ಕಬ್ಬಿಣದ ಕಂಬವೊಂದು ದೆಹಲಿಯ ಮೆಹರಾಲಿ ಪ್ರದೇಶದಲ್ಲಿದೆ. ಇದರ ಮೇಲೆ ಕ್ರಿ. ಶ. ೪೧೫ರಲ್ಲಿ ಉತ್ಕೀರ್ಣಗೊಂಡಿರುವ ಇಮ್ಮಡಿ ಚಂದ್ರಗುಪ್ತನ ಶಾಸನವಿದೆ. ಹೀಗೆಯೇ ಧಾರ್ ಎಂಬಲ್ಲಿ ಕಬ್ಬಿಣದ ಕಂಬದ ಮೇಲೆ ಪಾರಸೀಲೇಖನವಿದೆ. ಅದರ ಸುತ್ತ ೧೫೫೧–೯೨ರ ಅಕ್ಬರನ ಕಾಲದ ಒಂದು ಬರಹ ಇದೆಯಂತೆ. ಈ ಎರಡೂ ಕಂಬಗಳು ವಿಶೇಷ ರೀತಿಯಲ್ಲಿ ತಯಾರಿಸಿದ ಕಬ್ಬಿಣವಾದುದರಿಂದ ಇಂದಿಗೂ ತುಕ್ಕುಹಿಡಿಯದಿವೆ.

**ಚಿನ್ನ, ಬೆಳ್ಳಿ :** ಈ ಲೋಹದ ತಗಡುಗಳನ್ನು ಬರವಣಿಗೆಗೆ ಉಪಯೋಗಿಸಿರುವುದು ಕಂಡುಬರುತ್ತದೆ. ಪಂಜಾಬಿನ ಸಿರ್‌ಸುಖ್ ಪ್ರದೇಶದ ಗುಂಗು ಎಂಬಲ್ಲಿರುವ ಬೌದ್ಧ ಸ್ತೂಪವೊಂದರಲ್ಲಿ ಚಿನ್ನದ ತಗಡಿನ ಮೇಲೆ ಬರೆದ ಲಿಪಿ ದೊರೆತಿದೆ. ಆಂಧ್ರಪ್ರದೇಶದ ಕೃಷ್ಣ ಜಿಲ್ಲೆಯ ಭಟ್ಟಿಪ್ರೋಲು ಎಂಬಲ್ಲಿ ಬೆಳ್ಳಿಯ ತಗಡಿನ ಮೇಲೆ ಬರೆದ ಲಿಖಿತ ಸಿಕ್ಕಿದೆ. ರಾವಲ್ಪಿಂಡಿ ಜಿಲ್ಲೆಯ ಮಾಣಿಕಿಯಾಲದ ಬೌದ್ಧ ಸ್ತೂಪವೊಂದರಲ್ಲಿ ಲಿಪಿಯನ್ನುಳ್ಳ ಬೆಳ್ಳಿಯ ಬಟ್ಟೊಂದು ದೊರೆತಿದೆ. ಕ್ರಿ.ಶ. ೧೫೪೯ರಲ್ಲಿ ರಚಿತವಾದ 'ಜಯನೃಪ ಕಾವ್ಯ'ದಲ್ಲಿ 'ತೊಳಪ ಬೆಳ್ಳಿಯ ಪಲಗೆಗೆ ಕತ್ತುರಿಯ ಮಿಸುಪ ರಜಮಂ ಪರಿಕಲಿಸುತ್ತ' (೧೨–೫೨) ಎಂದು ಬೆಳ್ಳಿಯ ಹಲಗೆಯ ಬಳಕೆಯನ್ನು ಸೂಚಿಸಲಾಗಿದೆ.

**ಹಿತ್ತಾಳೆ :** 'ಕ್ರಿ.ಪೂ. ೬ನೆಯ ವರ್ಷದ ಶಾಸನವಿರುವ ಬುದ್ಧನ ಅವಶೇಷವನ್ನಿಟ್ಟ ಪಾತ್ರೆಯೊಂದು ಆಫ್ಘನಿಸ್ತಾನದ ವರ್ದಕ್ ಎಂಬಲ್ಲಿರುವ ಸ್ತೂಪವೊಂದರಲ್ಲಿ ಲಭಿಸಿದೆ. ಅಲಹಾಬಾದಿನ ಬಳಿಯಿರುವ ಕೋಸಂ ಎಂಬಲ್ಲಿ ಗುಪ್ತರ ಕಾಲದ ಮುದ್ರೆಯುಂಗುರ ದೊರೆತಿದ್ದು ಅದರ ಹಿತ್ತಾಳೆಯ ವಿಗ್ರಹಗಳ ಮೇಲೆ ಬರವಣಿಗೆಯಿದೆ"2 ಕರ್ನಾಟಕದಲ್ಲಿ ಅನೇಕ ಜೈನತೀರ್ಥಂಕರರ ಹಿತ್ತಾಳೆಯ ಪ್ರತಿಮೆಗಳ ಪೀಠಗಳು ಮತ್ತು ಪ್ರಭಾವಳಿಗಳಲ್ಲಿ ಕನ್ನಡ ಲಿಪಿಯ ಶಾಸನಗಳಿವೆ.

---

2. ಅದೇ ; ಪು. ೩೨

**ಕಂಚು :** 'ಇದರಲ್ಲಿ ಬ್ರಾಹ್ಮೀ, ಖರೋಹ್ಮೀ ಮತ್ತು ಗ್ರೀಕ್ ಲಿಪಿಗಳು ದೊರೆತಿವೆ. ಪೆಷಾವರಿನಲ್ಲಿ ದೊರೆತ ಒಂದು ಕಂಚಿನ ತಲೆಯ ಸುತ್ತ ಲಿಪಿಯಿದ್ದು ಇದನ್ನು ಇದುವರೆಗೆ ಓದಲಾಗಿಲ್ಲ. ತಾಮ್ರ ಪಟ್ಟಿಕೆಗಳನ್ನು ಪೋಣಿಸುವ ಉಂಗುರದ ಇಕ್ಕಡೆಗಳನ್ನು ಜೋಡಿಸಿ ಬೆಸೆದಿರುವ ಕಂಚಿನ ಹಲವು ರಾಜಲಾಂಛನಗಳ ಮುದ್ರೆಗಳ ಮೇಲೆ ಲಿಪಿ ಇರುವುದುಂಟು' ಎಂದು ಡಿ.ಎಲ್.ಎನ್. ಅವರು ತಿಳಿಸುತ್ತಾರೆ.

**ತಾಮ್ರ :** ಬುದ್ಧನ ಕಾಲದಿಂದಲೂ ದತ್ತವಾಗಿ ಬಂದ ಕೆಲವು ತಾಮ್ರ ಫಲಕಗಳ ಬಗೆಗೆ ಕ್ರಿ.ಶ. ೪೦೦ರಲ್ಲಿ ಫಾಹಿಯಾನ್ ಪ್ರಸ್ತಾಪಿಸಿದ್ದಾನೆ. ಪಂಜಾಬಿನ ಭಾವಲ್ಪುರ ಪ್ರದೇಶದ ಶ್ರೀ ವಿಹಾರದಲ್ಲಿ ದೊರೆತ ತಾಮ್ರಪಟ್ಟಿಕೆ ಕ್ರಿ.ಪೂ. ೪೬ಕ್ಕೆ ಸೇರಿದ್ದು, ಅತಿ ಪ್ರಾಚೀನವಾದುದಾಗಿದೆ. ಕ್ರಿ.ಶ. ೧೨೭೨ರ ಪೈಠಣದ ತಾಮ್ರ ಶಾಸನಗಳಲ್ಲಿ ಮೂರು ತಗಡುಗಳಿವೆ. ಕನ್ನಡ ನಾಡಿನಲ್ಲಿ ಗಂಗ ಮತ್ತು ಕದಂಬರ ಅನೇಕ ತಾಮ್ರ ಶಾಸನಗಳು ದೊರೆತಿವೆ. ರಾಷ್ಟ್ರಕೂಟ ಗೋಯಿಂದ (೩ನೇ ಗೋವಿಂದ)ನ ಕ್ರಿ.ಶ. ೮೦೪ರ ತಾಮ್ರಶಾಸನ 'ಕನ್ನಡವನ್ನು ಬಳಸಿ ಬರೆಯಲಾಗಿರುವ ಪ್ರಾಚೀನತಮ ಶಾಸನಗಳ ಪೈಕಿ ಒಂದಾಗಿದೆ.2 ಬಾದಾಮಿ ಚಾಳುಕ್ಯ ರಾಜನಾದ ಇಮ್ಮಡಿ ಕೀರ್ತಿವರ್ಮನ ಒಂದು ತಾಮ್ರ ಶಾಸನ (ಕ್ರಿ.ಶ. ೭೨೭ರಲ್ಲಿ ಲಿಖಿತವಾಗಿದೆ. ಇದು ಭೀಮರಥೀನದಿಯ ಉತ್ತರ ತೀರ ಪ್ರದೇಶಕ್ಕೆ ಸೇರಿದ್ದು ಕೋಲಾರ ಜಿಲ್ಲೆಯ ವಕ್ಕಲೇರಿ ಎಂಬ ಹಳ್ಳಿಯಲ್ಲಿ ದೊರೆತಿದೆ. ಅಣ್ಣಮಾಚಾರ್ಯರ ಸಂಗೀತ ಕೃತಿಗಳು ತಾಮ್ರಪಟ್ಟಗಳ ಮೇಲೆ ಲಿಖಿತವಾಗಿದ್ದು ತಿರುಪತಿಯ ಶ್ರೀನಿವಾಸ ದೇವಾಲಯದಲ್ಲಿ ಲಭ್ಯವಾಗಿವೆಯೆಂದು ತಿಳಿದುಬರುತ್ತದೆ.

ಶಿಲೆ ಮತ್ತು ಲೋಹೇತರ ವಸ್ತುಗಳಲ್ಲಿ ಒಣಗಿಸಿದ ಅಥವಾ ಸುಟ್ಟ ಮಣ್ಣಿನ ಬಿಲ್ಲೆಗಳು, ಸ್ಫಟಿಕ, ಚರ್ಮ, ಮರದ ಹಲಗೆಗಳು, ಭೂರ್ಜಪತ್ರ, ತಾಳಪತ್ರ, ಕಡತ, ಕೋರಿಕಾಗದ, ಕಾಗದಗಳು ಬರವಣಿಗೆಗೆ ಉಪಯೋಗವಾಗಿರುವುದನ್ನು ಕಾಣಬಹುದು.

---

1. ಕ. ಗ್ರಂ.ಸಂ. ; ೩೨–೩೩
2. ಕೊ. ವೈ. ರಮೇಶ : ಕರ್ನಾಟಕ ಶಾಸನಗಳ ಸಮೀಕ್ಷೆ ೧೯೭೦ ; ಪು. : ೪೧

**ಮಣ್ಣು :** ಮಣ್ಣಿನ ಬಿಲ್ಲೆಗಳು ಅಥವಾ ಮಡಕೆಯ ಮೇಲೆ ಕೆಲವು ಲಿಖಿತಗಳಿವೆ. ಬೌದ್ಧ ಧರ್ಮದ ಒಂದು ಶ್ಲೋಕ ಒಂದು ಮಣ್ಣಿನ ಬಿಲ್ಲೆಯ ಮೇಲಿದೆ. ಸಂಯುಕ್ತ ಪ್ರದೇಶದಲ್ಲಿ ಲಿಪಿಗಳನ್ನುಳ್ಳ ಅನೇಕ ಇಟ್ಟಿಗೆಗಳಲ್ಲಿ ಒಂದರ ಮೇಲೆ ಕುಮಾರಗುಪ್ತನ ಸಣ್ಣ ಶಾಸನ ಲಿಖಿತವಾಗಿದೆ. ಗೋರಖಪುರ ಜಿಲ್ಲೆಯ ಗೋಪಾಲಪುರದಲ್ಲಿ ದೊರೆತ ಕೆಲವು ಇಟ್ಟಿಗೆಗಳ ಮೇಲೆ ಬೌದ್ಧಸೂತ್ರ ಗ್ರಂಥವನ್ನು ಬರೆದಿದೆ ಎಂದು ತಿಳಿದುಬರುತ್ತದೆ. ಸಾಂಚಿಯಲ್ಲಿ ದೊರೆತ ಒಂದು ಮಣ್ಣಿನ ಮುಚ್ಚಳದ ಮೇಲೆ ಲಿಪಿಯಿದೆ. ಗುಹಸೇನನ ಆಳ್ವಿಕೆಯಲ್ಲಿ ಕ್ರಿ.ಶ. ೫೬೬–೬೭ರಲ್ಲಿ ಮಸಿಯಿಂದ ಬರೆದ ಮಡಕೆಯ ಒಂದು ಚೂರು ಲಭ್ಯವಾಗಿದೆ.

**ಸ್ಫಟಿಕ :** ಒಂದೇ ಒಂದು ಬರವಣಿಗೆ ಆಂಧ್ರದ ಕೃಷ್ಣ ಜಿಲ್ಲೆಯ ಭಟ್ಟಿಪ್ರೋಲು ಎಂಬ ಊರಿನಲ್ಲಿ ದೊರೆತಿರುವ ಸ್ಫಟಿಕದ ಮೇಲಿದೆ. ಇದರಲ್ಲಿ ಕೆಲವು ಲಿಪಿಗಳನ್ನು ಕೊರೆದಿದೆ.

**ಚರ್ಮ :** ಸುಬಂಧುವಿನ 'ವಾಸವದತ್ತಾ' ಗ್ರಂಥದಲ್ಲಿ ನಕ್ಷತ್ರಗಳನ್ನು ವರ್ಣಿಸುವಾಗ ಮಷೀ–ಅಜಿನಗಳನ್ನು ಹೆಸರಿಸಿದ್ದಾನೆ. ಇದರಿಂದ ಅಜಿನ ಅಥವಾ ಚರ್ಮ ಒಂದು ಲೇಖ್ಯ ವಸ್ತುವಾಗಿತ್ತೆಂದು ಹೇಳುತ್ತಾರೆ. ಭರತಖಂಡದಲ್ಲಿ ಚರ್ಮದ ಮೇಲೆ ಬರೆದಿರುವ ಯಾವ ಲಿಖಿತವೂ ದೊರೆಯದಿದ್ದರೂ ಭಾರತೀಯ ಲಿಪಿಯನ್ನುಳ್ಳ ಕೆಲವು ಚರ್ಮದ ತುಣುಕುಗಳು ಕಾಷ್‌ಗರ್‌ನಲ್ಲಿ ದೊರೆತಿವೆ. ಇವು ಈಗ ಪೀಟರ್ಸ್‌ಬರ್ಗ್‌ನಲ್ಲಿವೆಯೆಂದು ಜಿ. ಬೂಲರ್ ಹೇಳುತ್ತಾರೆ.3

**ಮರ :** ಮರದಿಂದ ತಯಾರಿಸಿದ ನುಣುಪಾದ ಹಲಗೆಗಳ ಮೇಲೆ ಕಪ್ಪು ಬಣ್ಣವನ್ನು ಬಳಿದು ಅದರ ಮೇಲೆ ಬಳಪದಿಂದ ಬರೆಯುತ್ತಿದ್ದರು. ವಿನಯ ಪಿಟಕ ಮತ್ತು ಜಾತಕಗಳಲ್ಲಿ ಮರದ ಹಲಗೆಗಳ ಪ್ರಸ್ತಾಪವಿದೆಯಂತೆ. 'ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ' ಎಂದು ಕುಮಾರವ್ಯಾಸನು ಹೇಳಿರುವುದರಿಂದ ಬರವಣಿಗೆಗೆ ಹಲಗೆಯನ್ನು ಉಪಯೋಗಿಸುತ್ತಿದ್ದರೆಂದು ಹೇಳಬಹುದು. ಓಲೆ ಮತ್ತು ಕಾಗದದ ಹಸ್ತಪ್ರತಿಗಳ ರಕ್ಷಾಕವಚಗಳಿಗೆ ಮರದ ಹಲಗೆಗಳನ್ನು

---

3. ಕ.ಗ್ರಂ.ಸಂ. ; ಪು. ೭೪–೩೫

ಉಪಯೋಗಿಸಲಾಗಿದ್ದು ಅವುಗಳ ಮೇಲೆ ರೇಖಾ ಅಥವಾ ಬಣ್ಣದ ಚಿತ್ರಗಳಿರುವುದನ್ನು ನೋಡಬಹುದು. "ಮರದ ಹಲಗೆಗಳ ಮೇಲೆಯೇ ಬರೆದ ಯಾವ ಗ್ರಂಥವೂ ಸಿಕ್ಕಿಲ್ಲ ; ಆದರೆ ಲಂಡನ್ನಿನ ಬಾಡ್ಲಿಯನ್ ಪುಸ್ತಕ ಭಂಡಾರದಲ್ಲಿ ಇಂಥ ಒಂದು ಹಸ್ತಪ್ರತಿಯಿದೆಯೆಂದೂ ಅದು ಅಸ್ಸಾಮು ಪ್ರದೇಶಕ್ಕೆ ಸೇರಿದ್ದೆಂದೂ ಡಾ. ವಿಂಟರ್ನಿಟ್ಸ್ ಅವರು ಹೇಳುತ್ತಾರಂತೆ."4

**ಭೂರ್ಜಪತ್ರ** : ಭೂರ್ಜವೃಕ್ಷವು ಉತ್ತರ ಭಾರತದ ಕೆಲವು ಪ್ರದೇಶಗಳಲ್ಲಿಯೂ, ಹಿಮಾಲಯ ಪರ್ವತ ಶ್ರೇಣಿಯಲ್ಲಿಯೂ ವಿಪುಲವಾಗಿ ಬೆಳೆಯುತ್ತದೆ. ಇದರ ತೊಗಟೆಯಲ್ಲಿರುವ ತೆಳು ಹಾಳೆಯಂತಿರುವ ಪದರಗಳನ್ನು ಬಿಡಿಸಿ ಹದಮಾಡಿ ಬೇಕಾದ ಆಕಾರಕ್ಕೆ ಕತ್ತರಿಸಿ ಪ್ರತಿಮಾಡಲು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ. ಇದು ತೆಳುವಾಗಿರುವುದರಿಂದ ಯಾವುದೇ ವಸ್ತುವಿನಿಂದ ಕೆರೆಯುವುದು ಅಥವಾ ಕೊರೆಯುವಂತಿಲ್ಲ ; ಲೇಖನಿಯಿಂದ ಮಸಿಯನ್ನುಪಯೋಗಿಸಿ ಬರೆದಿರುತ್ತಾರೆ. "ಇಂಥ ಹಸ್ತಪ್ರತಿಗಳು ಕಾಶ್ಮೀರ ದೇಶದಲ್ಲಿ ಅಧಿಕವಾಗಿ ದೊರೆಯುತ್ತವೆ. ಶಾರದಾ ಲಿಪಿಯಲ್ಲಿ ಭೂರ್ಜಪತ್ರದ ಮೇಲೆ ಬರೆದಿರುವ ಮಹಾಭಾರತದ ಆದಿಪರ್ವದ ಒಂದು ಪ್ರತಿ ತುಂಬ ಪ್ರಸಿದ್ಧವಾಗಿದೆ. ಬಖ್‌ಶಾಲಿ ಎಂಬಲ್ಲಿ ದೊರೆತ ಭೂರ್ಜಪತ್ರದ ಹಸ್ತಪ್ರತಿ ೭" × ೪" ಅಂಗುಲಗಳ ಅಳತೆಯಿದೆ ; ಇದು ೧೨ನೆಯ ಶತಮಾನದಲ್ಲಿ ಲಿಖಿತವಾದುದೆಂದು ಹೇಳುತ್ತಾರೆ. ಕಾಳಿದಾಸನ 'ವಿಕ್ರಮೋರ್ವಶೀಯ' ನಾಟಕದಲ್ಲಿ ಭೂರ್ಜಪತ್ರದ ಲಿಖಿತವೊಂದು ಗಾಳಿಗೆ ಹಾರಿಕೊಂಡು ಬಂದು ಬೀಳುತ್ತದೆ. ಬವರ್ ಹಸ್ತಪ್ರತಿಯು (Bower Mss) ಭೂರ್ಜಪತ್ರಗಳಲ್ಲಿ ಲಿಖಿತವಾದುದು ; ಇದರಲ್ಲಿ ೫೭ ಹಾಳೆಗಳಿವೆ ; ಇದರ ಲೇಖನ ಕಾಲ ಕ್ರಿ.ಶ. ೫ನೆಯ ಶತಮಾನವಿರಬಹುದು ; ಇದರಲ್ಲಿ ವೈದ್ಯವೇ ಮುಂತಾದ ವಿಷಯಗಳನ್ನು ಹೇಳಿದೆ. ದಕ್ಷಿಣ ಭಾರತದಲ್ಲಿ ಭೂರ್ಜವೃಕ್ಷಗಳಿಲ್ಲದಿರುವುದರಿಂದ ಅವುಗಳ ಪತ್ರಗಳ ಮೇಲೆ ಬರೆಯುವ ಅವಕಾಶವೇ ಉಂಟಾಗಲಿಲ್ಲ. ಪುಣೆಯ ಭಂಡಾರ್ಕರ್ ಸಂಶೋಧನ ಸಂಸ್ಥೆಯ ಪುಸ್ತಕ ಭಂಡಾರದಲ್ಲಿ ಇರುವ ಕೆಲವು ಭೂರ್ಜಪತ್ರ ಹಸ್ತಪ್ರತಿಗಳು ಉತ್ತರ ದೇಶಗಳಿಂದ ಸಂಗೃಹೀತವಾದುವು."1

---

4. ಅದೇ ೩೫

1. ಕನ್ನಡ ಗ್ರಂಥ ಸಂಪಾದನೆ ; ಪು. ೩೬

**ಅಲೋಯಿ** : 'ಭೂರ್ಜಪತ್ರದಂತೆಯೇ ಬರವಣಿಗೆಗೆ ಉಪಯೋಗಿಸಿರುವ ಅಲೊಯಿ (Aloe) ಮರದ, ಸ್ಥಳೀಯವಾಗಿ ಸಂಸಿ (sanci) ಎಂದು ಕರೆಯುವ ಮರದ ಒಳಪದರವನ್ನು ಅಸ್ಸಾಮಿನ ಬ್ರಹ್ಮಪುತ್ರ ಕಣಿವೆಯಲ್ಲಿ ಉಪಯೋಗಿಸಿದ್ದಾರೆ. ೧೫ನೆಯ ಶತಮಾನಕ್ಕೆ ಮೊದಲು ಹಸ್ತಪ್ರತಿ ಯಾವುದೂ ದೊರೆಯದಿದ್ದರೂ ಬಾಣನ ೭ನೆಯ ಶತಮಾನದ ಹೇಳಿಕೆಯಂತೆ ಅಸ್ಸಾಮಿನ ರಾಜ ಭಾಸ್ಕರವರ್ಮನು ಕನೂಜಿನ ರಾಜ ಹರ್ಷನಿಗೆ ಆಭರಣಗಳು ರೇಷ್ಮೆ ಬಟ್ಟೆಗಳು ಮತ್ತು ಅಲೊಯಿ ಮರದ ಒಳಪದರದಿಂದ ತಯಾರಿಸಿದ ಹಸ್ತಪ್ರತಿಗಳ ಕಟ್ಟುಗಳನ್ನು ಕಾಣಿಕೆಯಾಗಿ ಕಳುಹಿಸಿದನು. ಭೂರ್ಜಪತ್ರಗಳಂತಲ್ಲದೆ ಈ ಎಲೆಗಳ ಮಧ್ಯದಲ್ಲಿ ರಂಧ್ರಗಳನ್ನು ಮಾಡಿ ದಾರದಿಂದ ಪೋಣಿಸುತ್ತಿದ್ದರು. ಹೊರಗಣ ಕವಚಗಳು ಇದೇ ಮರದ ದಪ್ಪ ಪದರಗಳಾಗಿರುತ್ತಿದ್ದವು' ಎಂದು ಬಿ. ಎಸ್. ಕೇಶವನ್ ತಿಳಿಸಿದ್ದಾರೆ.2

**ತಾಳಪತ್ರ** : ತಾಳೆ ಅಥವಾ ಓಲೆ ಹಸ್ತಪ್ರತಿಗಳು ದಕ್ಷಿಣ ಭಾರತದಲ್ಲೆಲ್ಲಾ ತುಂಬಿಕೊಂಡಿವೆ. ಹಸ್ತಪ್ರತಿ ಎಂದೊಡನೆ ತಾಳೆಗರಿಯ ಕಟ್ಟುಗಳು ಎಂದು ತಿಳಿಯುವಷ್ಟರಮಟ್ಟಿಗೆ ಇದು ವ್ಯಾಪಕವಾಗಿದೆ. ತಾಳೆಯ ಗರಿಗಳನ್ನು ಕತ್ತರಿಸಿ ಹಸಿದಾಗಿರುವಾಗಲೆ ಕುದಿನೀರಿನಲ್ಲಿ ಬೇಯಿಸಿ ನೆರಳಲ್ಲಿ ಒಣಗಿಸಿ ಒಂದು ಆಕಾರಕ್ಕೆ ಕತ್ತರಿಸಿ ಬರೆಯಲು ಸಿದ್ಧಪಡಿಸುತ್ತಿದ್ದರೆಂದು ತಿಳಿದುಬರುತ್ತದೆ. ಎಲೆಯ ಮೇಲೆ ಕಬ್ಬಿಣದ ಸಲಾಕೆಯಂತಹ ವಸ್ತುವಿನಿಂದ (ಕಂಟದಿಂದ) ಅಕ್ಷರಗಳನ್ನು ಬರೆದು ಅಥವಾ ಕೊರೆದು ಮಸಿಯನ್ನು ಹಚ್ಚುತ್ತಿದ್ದರು. ಈ ಗರಿಗಳನ್ನು ಬರವಣಿಗೆಗೆ ಉಪಯೋಗಿಸುತ್ತಿದ್ದುದನ್ನು ಪ್ಲಿನಿ (ಕ್ರಿ.ಶ. ೨೩–೭೯) ಎಂಬ ಪ್ರಕೃತಿತಜ್ಞನು ಹೇಳಿದ್ದಾನೆ. ಹ್ಯೂಯುನ್‌ತ್ಸಾಂಗನು (ಕ್ರಿ.ಶ. ೬೨೯–೬೪೫) ಕೊಂಕಣಪುರದ ಉತ್ತರಕ್ಕೆ ತಾಳೆಮರಗಳ ಕಾಡಿರುವುದನ್ನೂ ಇವುಗಳ ಎಲೆಗಳನ್ನು ಜನರು ಬರವಣಿಗೆಗಾಗಿ ಉಪಯೋಗಿಸುವುದನ್ನೂ ದಾಖಲಿಸಿದ್ದಾನೆ. ಸು.ಕ್ರಿ.ಶ. ೧೦೩೦ರಲ್ಲಿ ಭಾರತಕ್ಕೆ ಬಂದಿದ್ದ ಅಲ್‌ಬೆರೂನಿ ತಾಳೆ ಮತ್ತು ಭೂರ್ಜಪತ್ರಗಳನ್ನು ನೋಡಿದ್ದುದಾಗಿ ತಿಳಿಸಿದ್ದಾನೆ. ಒಂದು ಗಜ ಉದ್ದವಾಗಿಯೂ ಮೂರು

2. The Book in India ; Ed. by B. S. Keshavan, National Book Trust, India, New Delhi-16, 1986, P.57-59

ಕೈಬೆರಳುಗಳಷ್ಟು ಅಗಲವಾಗಿಯೂ ಇರುವ ಈ ತಾಳೆ ಎಲೆಗಳನ್ನು ಬರವಣಿಗೆಗೆ ಉಪಯೋಗಿಸುವರೆಂದೂ ಬರೆದನಂತರ ಎಲ್ಲ ಎಲೆಗಳನ್ನೂ ಅವುಗಳ ಮಧ್ಯದಲ್ಲಿ ಮಾಡಿದ ರಂಧ್ರದ ಮೂಲಕ ದಾರವನ್ನು ಹಾಕಿ ಕಟ್ಟಿಡುವರೆಂದೂ ತಿಳಿಸಿದ್ದಾನೆ.[3] ಅಬ್ದುರ್ ರಜಾಕ್ ಎಂಬಾತನು ವಿಜಯನಗರದಲ್ಲಿ ಜನರು ಈ ತಾಳೆಗರಿಯನ್ನು ಬರೆಯಲು ಉಪಯೋಗಿಸುತ್ತಿದ್ದುದನ್ನು ನೋಡಿದುದಾಗಿ ಹೇಳಿ ಈ ಓಲೆಗಳಲ್ಲಿ ತಾಲ ಶ್ರೀತಾಲವೆಂದು ಎರಡು ವಿಧವಿದೆ ಎಂದಿದ್ದಾನೆ. ತಾಲವು ಎರಡು ಬೆರಳು ಅಗಲವಾಗಿಯೂ, ಎರಡು ಗಜ ಉದ್ದವಾಗಿಯೂ ಇದ್ದು ಇದರ ಮೇಲೆ ಕಬ್ಬಿಣದ ಕಂಟದಿಂದ ಬರೆಯುತ್ತಿದ್ದರೆಂದೂ, ಈ ಅಕ್ಷರಗಳು ಬಣ್ಣದಿಂದ ಕೂಡಿರದೆ ಸ್ವಲ್ಪ ಬಿಳುಪಾಗಿ ಮಾತ್ರ ಕಾಣುತ್ತಿದ್ದುವೆಂದೂ ತಿಳಿಸಿದ್ದಾನೆ. ಮತ್ತೊಂದು ವಿಧವಾದ ಶ್ರೀತಾಲದಲ್ಲಿ ಎಲೆಯನ್ನು ಮೊದಲು ಕಪ್ಪು ಮಾಡಿ, ಅದರ ಮೇಲೆ ಲೇಖನಿಯಂತಹ ಮೃದುವಾದ ಕಲ್ಲಿನಿಂದ ಬರೆಯುತ್ತಿದ್ದರೆಂದೂ, ಇದರಲ್ಲಿ ಕಪ್ಪು ಎಲೆಯ ಮೇಲೆ ಬಿಳಿಯ ಅಕ್ಷರಗಳು ಕಾಣುತ್ತಿದ್ದುವೆಂದೂ ಹೇಳಿದ್ದಾನೆ. ಈ ರೀತಿ ಬರೆಯುತ್ತಿದ್ದುದನ್ನು ಎ. ಹ್ಯಾಮಿಲ್ಟನ್ ಎಂಬಾತನು ತಾನು ಕೆನರಾ (ದಕ್ಷಿಣ ಕನ್ನಡ, ಉತ್ತರ ಕನ್ನಡ) ಮತ್ತು ದಕ್ಷಿಣ ಭಾರತದಲ್ಲಿ ಕಂಡುದಾಗಿ ಹೇಳಿದ್ದಾನೆ. ರಾಜೇಂದ್ರಮಿತ್ರ ಅವರು ಬಂಗಾಳದಲ್ಲಿ 'ಚಂಡಿ' ಎಂಬ ಗ್ರಂಥ ಓಲೆಯಲ್ಲಿರುವುದಾಗಿ ತಿಳಿಸಿದ್ದಾರೆ.

ಈ ತಾಳೆಗ್ರಂಥಗಳು ಭಾರತದ ವಿವಿಧ ಭಾಗಗಳಲ್ಲಿ ದೊರೆತರೂ ಒರಿಸ್ಸಾ, ಗುಜರಾತ್, ತಮಿಳುನಾಡು, ಆಂಧ್ರ, ಕೇರಳ ಮತ್ತು ಕರ್ನಾಟಕ ಪ್ರಾಂತ್ಯಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯ, ಕನ್ನಡ ಅಧ್ಯಯನ ಸಂಸ್ಥೆ, ಮದರಾಸು ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ ಲೈಬ್ರರಿ ಮತ್ತು ಅಡಿಯಾರ್ ಲೈಬ್ರರಿಗಳಲ್ಲಿ ತಿರುವಾಂಕೂರು ಸರಸ್ವತೀ ಮಹಲ್ ಲೈಬ್ರರಿಯಲ್ಲಿ ಬಹುಮಟ್ಟಿನ ಹಸ್ತಪ್ರತಿಗಳೆಲ್ಲವೂ ಓಲೆಯಲ್ಲಿವೆ. 'ಗುಪ್ತರ ಲಿಪಿಯಲ್ಲಿ ಬರೆದ ಹಳೆಯ ಓಲೆಗ್ರಂಥವನ್ನು (೬ನೆಯ ಶತಕ) ಜಪಾನಿನ ಹೊರಿಂಜಿ (Horinzi) ಎಂಬ ಮಠದಲ್ಲಿ ಕಾಪಾಡಲಾಗಿದೆ. ತಕ್ಲಮಕನ್ (Taklamakan) ಎಂಬ ಮರುಭೂಮಿಯಲ್ಲಿ ಇನ್ನೂ ಹಳೆಯ

3. Alberuni's India ; Ed. by Edward C. Sachan, P. 171

ಾಲದ ಓಲೆಗ್ರಂಥಗಳಿರಬಹುದೆಂದೂ, ಇದನ್ನು ನಿಖರವಾಗಿ ಹೇಳಲು ಯಾವ ಆಧಾರ ಸಾಹಿತ್ಯವೂ ಇಲ್ಲವೆಂದೂ, ಆದರೆ ನೇಪಾಲದಲ್ಲಿ ಗುಪ್ತಲಿಪಿಯು ಹಸ್ತ ಪ್ರತಿಗಳನ್ನು (೭ನೆಯ ಶತಕ) ನೋಡಿದುದಾಗಿಯೂ, ಗುಜರಾತಿನಲ್ಲಿರುವ ಪಟ್ಟನ್ ಹಸ್ತಪ್ರತಿಗಳ ಭಂಡಾರವು ಅತ್ಯಂತ ಪ್ರಾಚೀನವಾದ ಹಸ್ತಪ್ರತಿಗಳನ್ನು ಹೊಂದಿದ್ದು, ಅತ್ಯಂತ ಪುರಾತನ ಕಾಲ ನಮೂದಿತ 'ನಿಶೀಥಚೂರ್ಣಿ' ಎಂಬ ಹಸ್ತಪ್ರತಿಯು ಕಾಲ ವಿಕ್ರಮ ಸಂವತ್ಸರ ೧೧೫೭ (ಕ್ರಿ.ಶ. ೧೧೦೧) ಎಂದೂ, ಇನ್ನೂ ಪುರಾತನವಾದ ಹಸ್ತಪ್ರತಿಗಳು ಇರಬಹುದಾದರೂ ಅವುಗಳಲ್ಲಿ ಕಾಲವು ಉಕ್ತವಾಗಿಲ್ಲದಿರುವುದರಿಂದ ಇಷ್ಟೇ ಸರಿ ಎಂದು ಹೇಳುವಂತಿಲ್ಲ'ವೆಂದೂ ಬರೋಡ ಓರಿಯಂಟಲ್ ಇನ್‌ಸ್ಟಿಟ್ಯೂಟಿನ ನಿರ್ದೇಶಕರಾದ ಬಿ. ಭಟ್ಟಾಚಾರ್ಯರು ತಿಳಿಸಿದ್ದಾರೆ.1

'ಜಯಸಲ್ಮೇರಿನಲ್ಲಿ ಜೈನತತ್ವಕ್ಕೆ ಸಂಬಂಧಪಟ್ಟ ಜ್ಞಾನಭಂಡಾರಗಳಿವೆ. ಪುರಾತನ ಓಲೆ ಹಸ್ತಪ್ರತಿಗಳ ಸಂಗ್ರಹ ಶಂಭುನಾಥ್ ಜೈನಮಂದಿರದ ಹತ್ತಿರ ಇರುವ ಕೋಟೆಯಲ್ಲಿದೆ. ಇಲ್ಲಿ ಕೆಲವು ಹಸ್ತಪ್ರತಿಗಳು ಅಸ್ತವ್ಯಸ್ತವಾಗಿ ಶಿಥಿಲ ವಾಗಿವೆ. ಇವುಗಳಲ್ಲಿ 'ಕುವಲಯಮಾಲಾ', 'ಮಹಾಪುರುಷ ಚರಿತ್ರ', 'ವಸುದೇವ ಹಿಂಡಿ' ಮೊದಲಾದ ಮುಖ್ಯಗ್ರಂಥಗಳಿವೆ. 'ಪಂಚಮಿಕಹ' ಎಂಬ ಗ್ರಂಥದ ಹಸ್ತಪ್ರತಿಯು ಕಾಲ ವಿ.ಶ. ೧೧೦೯ (ಕ್ರಿ.ಶ. ೧೦೫೩) ಮತ್ತು 'ಕುವಲಯ ಮಾಲಾ' ವಿ.ಶ. ೧೧೩೯ (ಕ್ರಿ.ಶ. ೧೦೮೩). 'ವಸುದೇವ ಹಿಂಡಿ' ಗ್ರಂಥದಲ್ಲಿ ಕಾಲ ಉಲ್ಲೇಖಿತವಾಗಿಲ್ಲವಾದರೂ ಪುರಾತನವಾದುದೆಂದು ತೋರುತ್ತದೆ. ಇಲ್ಲಿರುವ ಅತ್ಯಂತ ಪುರಾತನವಾದ ಓಲೆಗ್ರಂಥ ಕ್ರಿ.ಶ. ೮೪೩ ರಿಂದ ೯೪೨ರ ವರೆಗೆ' ಎಂದು ಜೋಧಪುರದ ಜಿನಸಾಗರಸೂರಿ ಹೇಳುತ್ತಾರೆ. ಗಾಡ್‌ಫ್ರೇ ಎಂಬಾತನಿಗೆ ಕಾಷ್‌ಗರ್‌ನಲ್ಲಿ ಸಿಕ್ಕಿದ ತಾಳಪತ್ರದ ಹಸ್ತಪ್ರತಿ ಕ್ರಿ.ಶ. ೫ನೇ ಶತಮಾನದಲ್ಲಿ ಲಿಖಿತವಾದುದಂತೆ. ಟರ್ಫಾನ್ ಎಂಬಲ್ಲಿ ದೊರೆತ ಓಲೆಗಳ ೧೪೪ ಚೂರುಗಳನ್ನು ಸರಿಯಾಗಿ ಜೋಡಿಸಿ ಲೂಡರ್ಸ್ (Luders) ಎಂಬ ಜರ್ಮನ್ ವಿದ್ವಾಂಸ ಅಶ್ವಘೋಷನ ಎರಡು ನಾಟಕಗಳ ಸ್ವಲ್ಪ ಭಾಗ

1. Indian Archieves Vol. I-3, 1947.

ಗಳನ್ನು ಪುನಃ ರಚಿಸಿ ಪ್ರಕಟಿಸಿದ್ದಾನೆ. ಈ ಓಲೆಯ ಚೂರುಗಳೇ ಅತ್ಯಂ
ಪ್ರಾಚೀನವಾದುವೆಂದು ಹೇಳುತ್ತಾರೆ."2

ಕನ್ನಡದಲ್ಲಿ ನಮಗೆ ದೊರೆತ ಓಲೆಗ್ರಂಥಗಳಲ್ಲಿ ಮೈಸೂರು ಕನ್ನ
ಅಧ್ಯಯನ ಸಂಸ್ಥೆಯಲ್ಲಿರುವ 'ನಾಮಲಿಂಗಾನುಶಾಸನ ಟೀಕೆ' ಶಕ ೧೦೫
(ಕ್ರಿ.ಶ. ೧೧೩೦)ರಲ್ಲಿ ಪ್ರತಿಯಾಗಿದ್ದು ಅತಿ ಪ್ರಾಚೀನ ಕಾಲ ನಮೂದಿತ ಹಸ್ತ
ಪ್ರತಿಯಾಗಿದೆ. ಶ್ರವಣಬೆಳಗೊಳದ ಜೈನಮಠದಲ್ಲಿರುವ ಶಕ ೧೧೫೫ (ಕ್ರಿ.ಶ
೧೨೩೩)ರಲ್ಲಿ ಪ್ರತಿಯಾದ ಮಾಧವಚಂದ್ರ ತ್ರೈವಿದ್ಯನ 'ಕ್ಷಪಾಸಾರ'ದ ಕರ್ಣಾಟ
ವ್ಯಾಖ್ಯಾನದ ಓಲೆ ಪ್ರತಿಯೂ ಪ್ರಾಚೀನವಾದುದಾಗಿದೆ. ಇದನ್ನು ಬಿಟ್ಟರೆ ಶ
೧೨೬೪ (ಕ್ರಿ.ಶ. ೧೩೪೨)ರಲ್ಲಿ ಲಿಖಿತವಾದ ರನ್ನನ 'ಗದಾಯುದ್ಧ'ದ ಹಸ್ತಪ್ರತಿ
ಇದರಲ್ಲಿರುವ ತೊಡಕೆಂದರೆ ಮೂಲಗ್ರಂಥಕ್ಕೆ ಸೇರಿದಂತೆಯೇ ಕಾಲ ನಮೂದಿ
ಬರವಣಿಗೆಯಿಲ್ಲದಿರುವುದು ; ಅಕ್ಷರಗಳು ಮಾತ್ರ ಒಬ್ಬನವೇ ಎಂದು
ತೋರುತ್ತದೆ ; ಮತ್ತೆ ಲಿಪಿಯೂ ಕೂಡ ಸಾಕಷ್ಟು ಪುರಾತನವಾದುದೆಂದು
ಹೇಳಬಹುದು. ಇವುಗಳಲ್ಲದೆ ಶಕ ೧೩೦೧ (ಕ್ರಿ.ಶ. (೧೩೭೯)ರಲ್ಲಿ ಪ್ರತಿಯಾದ
ಪಂಪನ 'ಆದಿಪುರಾಣ'ದ ಪ್ರತಿ ಮತ್ತು ಶಕ ೧೩೧೭ (ಕ್ರಿ.ಶ. ೧೩೯೫)ರಲ್ಲಿ
ಲಿಖಿತವಾದ ಅಭಯ ಚಂದ್ರ ಸೈದ್ಧಾಂತಿಕ ದೇವರ 'ನಾಚಿರಾಜೀಯ' ಗ್ರಂಥಗಳು
ಮುಖ್ಯವಾದುವಾಗಿವೆ. ಆದಿಪುರಾಣದ ಹಸ್ತಪ್ರತಿ ಶ್ರವಣಬೆಳಗೊಳದ ಜೈನ
ಮಠದ ಹಸ್ತಪ್ರತಿ ಭಂಡಾರದಲ್ಲಿದ್ದು ಅದರ ಮೈಕ್ರೊಫಿಲಂ ಪ್ರತಿ ಮೈಸೂರು
ಕನ್ನಡ ಅಧ್ಯಯನ ಸಂಸ್ಥೆಯಲ್ಲಿದೆ. ಕಾಲನಮೂದಾಗಿರುವ ಮತ್ತೂ ಕೆಲವು
ಮುಖ್ಯ ಹಸ್ತಪ್ರತಿಗಳೆಂದರೆ ಕ್ರಿ.ಶ. ೧೪೧೬ರಲ್ಲಿ ಪ್ರತಿಯಾದ ಗುಣವರ್ಮನ
'ಪುಷ್ಪದಂತ ಪುರಾಣ', ಇದರ ೨೨.೧ × ೨ ಇಂಚು ಉದ್ದ ಅಗಲಗಳನ್ನುಳ್ಳ
ಪತ್ರದ ಒಂದೊಂದು ಬದಿಯಲ್ಲಿ ಸರಾಸರಿ ೯ ಪಂಕ್ತಿಗಳಿದ್ದು ಪ್ರತಿ ಪಂಕ್ತಿಯಲ್ಲಿ
೧೧೫ ಅಕ್ಷರಗಳಿವೆ. ಕ್ರಿ.ಶ. ೧೫೫೪ರಲ್ಲಿ ಪ್ರತಿ ಮಾಡಿದ ಗದುಗಿನ ನಾರಣಪ್ಪನ
'ಮಹಾಭಾರತ'ದ ಪ್ರತಿ ಮುಖ್ಯವಾದುದಾಗಿದೆ. ದಾರವನ್ನು ಎಳೆದಾಗ
ಹರಿಯದಿರಲೆಂದು ಓಲೆಯ ಪ್ರತಿ ರಂಧ್ರಗಳಿಗೂ ಬೆಳ್ಳಿಯ ಉಂಗುರಗಳನ್ನು
ಅಳವಡಿಸಿರುವುದು ಮೆಚ್ಚುಗೆಯ ವಿಷಯವಾಗಿದೆ. ಹೀಗೆ ಓಲೆಗಳ ಉಪಯೋಗ

---

2. ಕ. ಗ್ರಂ. ಸಂ. ಪು. ೩೬–೩೭

ಮುಂದುವರಿದಿದ್ದು ಕ್ರಿ.ಶ. ೧೮೫೦ರಲ್ಲಿದ್ದ ಮುಮ್ಮಡಿ ಕೃಷ್ಣರಾಜ ಅಳಿಯ ಲಿಂಗರಾಜ ಮೊದಲಾದವರ ಕೃತಿಗಳೂ ತಾಳಪತ್ರದಲ್ಲಿ ಲಿಖಿತವಾಗಿವೆ.

**ಕಡತ :** ಇದು ಬಟ್ಟೆಯ ಎರಡೂ ಬದಿಗಳಿಗೆ ಹುಣಸೆ ಬೀಜದ ಚರಿ ಮತ್ತು ಇದ್ದಿಲಪುಡಿಗಳ ಮಿಶ್ರಣವನ್ನು ಸವರಿ ತಯಾರಿಸಿದ, ಒಂದು ನಿರ್ದಿಷ್ಟ ಅಗಲದ, ಹಲವು ಅಡಿ ಉದ್ದವಾಗಿರುವ, ಸುಮಾರು ನಿರ್ದಿಷ್ಟ ಅಳತೆಗೆ ಮಡಿಕೆಗಳನ್ನುಳ್ಳ ಪುಸ್ತಕದಂತಿರುವ ಒಂದು ಪ್ರತಿಗೆ ಕಡತದ ಹಸ್ತಪ್ರತಿ ಎನ್ನುತ್ತಾರೆ. ಇದರ ಮಡಿಕೆಗಳು ಒಮ್ಮೆ ಎಡಕ್ಕೆ ಮತ್ತೊಮ್ಮೆ ಬಲಕ್ಕೆ ಹೀಗೆ ಮಡಿಕೆಯಾಗಿರುತ್ತದೆ ; ಎರಡೂ ಬದಿಗಳಲ್ಲಿ ಬರೆಯಬಹುದಾದಂತಹ ರೂಪವನ್ನು ಪಡೆದಿರುತ್ತದೆ ; ಕಪ್ಪು ಸಮತಲದ ಮೇಲೆ ಬಳಪದಕಲ್ಲಿನಿಂದ ಬರೆದ ಬಿಳಿಯ ಅಕ್ಷರಗಳು ರೂಪುಗೊಳ್ಳುತ್ತವೆ. ಇವುಗಳನ್ನು ಶ್ರೀಮಂತ ಮನೆಗಳಲ್ಲಿ, ಮಠಗಳಲ್ಲಿ, ಅರಮನೆ ಗುರುಮನೆಗಳಲ್ಲಿ ದಿನಚರಿಯ ಲೆಕ್ಕಪತ್ರಗಳನ್ನು ಬರೆಯಲು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಅಪರೂಪವಾಗಿ ಕೆಲವು ಕಾವ್ಯಗಳನ್ನೂ ಇದರಲ್ಲಿ ಬರೆದಿರುವುದನ್ನು ಕಾಣಬಹುದು. 'ಕೆಳದಿನೃಪವಿಜಯ'ದ ಇಂತಹ ಒಂದು ಹಸ್ತಪ್ರತಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿದೆ. ಈ ಕಡತಗಳು ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿರುವಂತೆ ತೋರುತ್ತದೆ.

ಕನ್ನಡ ನಾಡಿನಲ್ಲಿ ಕಡತಗಳ ಉಪಯೋಗ ಬಹಳ ಕಾಲದಿಂದಲೂ ಇದ್ದುದಕ್ಕೆ ಕೆಲವು ಸಾಕ್ಷಿಗಳು ದೊರೆಯುತ್ತವೆ. "ಶುಭತುಂಗದೇವನನ್ನು (ರಾಷ್ಟ್ರಕೂಟ ಕೃಷ್ಣ–೩ ಕ್ರಿ.ಶ. ೯೪೦–೯೬೮) ಹೊಗಳುವ 'ಸೂಕ್ತಿಸುಧಾರ್ಣವ'ದ ಅಜ್ಞಾತ ವೃತ್ತವೊಂದರಲ್ಲಿ, ಪೊನ್ನನ 'ಶಾಂತಿಪುರಾಣ'ದಲ್ಲಿ, ಪದ್ಮಣಾಂಕನ (೧೩೮೫) ಪದ್ಮರಾಜಪುರಾಣ'ದಲ್ಲಿ, ಕನಕದಾಸರ (೧೫೫೦) 'ಮೋಹನ ತರಂಗಿಣಿ'ಯಲ್ಲಿ, ಪಾಯಣವರ್ಣಿಯ (೧೬೫೯) 'ಜ್ಞಾನಚಂದ್ರ ಚರಿತೆ'ಯಲ್ಲಿ ಕಡತಗಳ ಉಲ್ಲೇಖಗಳಿವೆ. ಕ್ರಿ.ಶ. ೧೦೬೩ರ ನಾಗಾವಿಯ ಶಾಸನದಲ್ಲಿ ಮಧುಸೂದನ ಕೋಳಿಮರಸರು 'ಕಡಿತವೆರ್ಗ್ಗಡೆ'ಗಳಾಗಿದ್ದರೆಂದು ನಮೂದಿತವಾಗಿದೆ."[1]

1. ಕರ್ನಾಟಕ ಭಾರತಿ ೧೬–೧ ೨. ಎಸ್. ಶಿವಣ್ಣ

**ಕೋರಿಕಾಗದ :** ಕಡತದ ಅನಂತರ ಬರುವ ವಸ್ತುವೆಂದರೆ ಕೋರಿಕಾಗದ ಅಥವಾ ಕೈಯಿಂದ ಮಾಡಿದ ಕಾಗದ ಯಂತ್ರದಿಂದ ತಯಾರಾದ ಕಾಗದಕ್ಕಿಂತ ಒರಟಾಗಿರುವ ಈ ಕಾಗದದಲ್ಲಿ ಬೇಗ ನಶಿಸಿಹೋಗುವಂತಹ ಕಬ್ಬಿಣದ ಅಂಶ ಸೇರಿರುವುದಿಲ್ಲ ; ಜಿಲಟಿನ್ ಮತ್ತು ಪಿಷ್ಟ ಪದಾರ್ಥಗಳನ್ನು ಉಪಯೋಗಿಸಿರುವುದಿಲ್ಲ. ಇದು ಬಟ್ಟೆಯ ಚೂರುಗಳಿಂದ ಮಾತ್ರ ತಯಾರು ಮಾಡಿದ್ದಾಗಿರುತ್ತದೆ.

"ಗುಜರಾತಿನಲ್ಲಿ ದೊರೆತ ಕಾಗದದ ಒಂದು ಹಸ್ತಪ್ರತಿ ಕ್ರಿ.ಶ. ೧೨೨೦-೨೪ರ ಕಾಲಕ್ಕೆ ಸೇರಿದ್ದೆಂದು ಗೊತ್ತಾಗುತ್ತದೆ. ಕನ್ನಡ ನಾಡಿನಲ್ಲಿ ಕಾಗದವನ್ನು ಲೇಖ್ಯವಸ್ತುವನ್ನಾಗಿ ಉಪಯೋಗಿಸುವ ರೂಢಿ ಕ್ರಿ.ಶ. ೧೫೦೦ರ ಸುಮಾರಿನಲ್ಲಿ ಆರಂಭವಾಗಿರಬಹುದು. ಅಭಿನವ ಮಂಗರಾಜನು 'ಪತ್ರಿಕೆಯೆನಲು ಕಾಗದ ಮಕ್ಕು ದೌತಿ ಮಸಿಪಾತ್ರೆಯಕ್ಕು ಕಲಾಮು ಲೇಖಸಿಯಕ್ಕು" (ಅಭಿಧಾ ಪು. ೧೦೫-೧೫) ಎಂದು ಹೇಳಿದ್ದಾನೆ. ಗೋವಿಂದವೈದ್ಯನು ೧೬೪೮ರಲ್ಲಿ ರಚಿತವಾದ ತನ್ನ 'ಕಂಠೀರವ ನರಸರಾಜ ವಿಜಯ'ದಲ್ಲಿ 'ಕಾಗಜ' ಶಬ್ದವನ್ನು ಬಳಸಿದ್ದಾನೆ. (ಸಂಧಿ ೧೩-೭೦, ೭೧). ಕಾಗದವನ್ನು ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಹಾಕಿ ಕೈಯಿಂದ ಮಾಡುತ್ತಿದ್ದರು. ಇದು ಸ್ವಲ್ಪ ಮಂದವಾಗಿಯೂ ಒರಟಾಗಿಯೂ ಮಾಸಲು ಬಿಳುಪು ಬಣ್ಣದ್ದಾಗಿಯೂ ಇರುತ್ತದೆ. ಇದರ ಮೇಲೆ ಮಸಿಯಲ್ಲಿ ಬರೆಯುತ್ತಿದ್ದರು. ರಾಜರೂ ಅವರ ಅಧಿಕಾರಿಗಳೂ ಪಾಳೆಯಗಾರರೂ ತಂತಮ್ಮ ನಿರೂಪಗಳನ್ನೂ ಸನ್ನದುಗಳನ್ನೂ ಸಾಧಾರಣವಾಗಿ ಇಂಥ ಕಾಗದದ ಮೇಲೆ ಬರೆಯುತ್ತಿದ್ದರು. ದಕ್ಷಿಣ ಕರ್ನಾಟಕದಲ್ಲಿ ಕಾಗದದ ಹಸ್ತಪ್ರತಿಗಳು ಸಾಹಿತ್ಯಕೃತಿಗಳಿಗೆ ಸಂಬಂಧಿಸಿದುವು ಹೆಚ್ಚಾಗಿ ದೊರೆಯುತ್ತಿಲ್ಲ. ಉತ್ತರ ಕರ್ನಾಟಕದಲ್ಲಿ ಆದರೆ ಇವು ಹೇರಳವಾಗಿ ಲಭ್ಯವಾಗಿವೆ. ಇದನ್ನು ಕೋರಿಕಾಗದ ಎಂದು ಕರೆಯುವ ರೂಢಿ ಇದ್ದಿತು."[1]

**ಕಾಗದ :** ತಾಡಪತ್ರ ಕೋರಿಕಾಗದಗಳ ಜೊತೆಜೊತೆಗೆ ಯಂತ್ರದಿಂದ ತಯಾರಾದ ಕಾಗದದ ಹಸ್ತಪ್ರತಿಗಳೂ ನಮಗೆ ದೊರೆಯುತ್ತವೆ.

---

1. ಕ.ಗ್ರಂ.ಸಂ. ; ಪು. ೪೧

ಎಚ್. ದೇವೀರಪ್ಪನವರು "ಈ ಲೇಖಕನಿಗೆ ತಿಳಿದಿರುವಂತೆ ಶಕವರ್ಷ ೧೪೧೨
ರಿಂದ ಸಿದ್ಧಾರ್ಥ ಸಂವತ್ಸರದ ಆಶ್ವಯುಜ ಬಹುಳ ೧೦ (ಕ್ರಿ.ಶ. ೧೫೦೦)
ಲಿಖಿಸಿರುವ 'ಏಕೋತ್ತರ ಶತಸ್ಥಲ ಟೀಕು' ಅತ್ಯಂತ ಹಳೆಯದಾದ ಕಾಗದದ
ಪ್ರತಿ"2 ಎಂದು ಹೇಳಿದ್ದಾರೆ. ಆದರೆ ಈ ಪ್ರತಿಗೆ ಉಪಯೋಗಿಸಿರುವ ಕಾಗದ
೧೦ನೆಯ ಶತಮಾನದ್ದಾಗಿರುವುದರಿಂದ ಇದು ಮೂಲಪ್ರತಿಯೋಪರ
ನಕಲಾಗಿರುವುದು ಕಂಡುಬರುತ್ತದೆ. ಆದುದರಿಂದ ನನಗೆ ತಿಳಿದ ಮಟ್ಟಿಗೆ
ಸ್ವಸ್ತಿಶ್ರೀಮತ್ಸಕ ವರ್ಷ ೧೪೪೯ (ಕ್ರಿ.ಶ. ೧೫೨೭) ಪ್ರಭವ ಸಂವತ್ಸರದ ಪುಷ್ಯ
ಮಾಸದ ಬಹುಳ ಷಷ್ಟಿ ಆದಿತ್ಯ ವಾರದ ಪಾಲ್ಗುಣ ನಕ್ಷತ್ರ ಸೌಭಾಗ್ಯಯೋಗ
ಗರಜಾಕರಣದಲ್ಲಿ ಸೇಡಬಳದ ಬಸ್ತಿಯ ಶ್ರೀ ಶಾಂತಿನಾಥನ ಸಮಕ್ಷದಲ್ಲಿ ಶ್ರೀ
ವೀರವರ್ಧಮಾನ ಸ್ವಾಮಿಯ ಪುರಾಣವನು ಶ್ರೀ ಮಲ್ಲಿಕ್ಷೇಸೇನ ದೇವರುಗಳ
ಪ್ರಿಯಾಗ್ರಶಿಷ್ಯರು ಪಾಯಣ್ಣಗಳು ಬರದು ಮುಗಿದುದು" ಎಂದು ಹೇಳಿ ಪ್ರತಿ
ಮಾಡಿರುವ ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ'ದ ಹಸ್ತ
ಪ್ರತಿಯೇ ಈಗ ದೊರೆಯುವ ಅತಿ ಪ್ರಾಚೀನ ಕಾಗದದ ಹಸ್ತಪ್ರತಿಯೆಂದು
ಹೇಳಬಹುದು. ಈ ಹಸ್ತಪ್ರತಿಯೊಡನೇ ಸೇರಿಕೊಂಡಿರುವ ಇದೇ ಪ್ರತಿಕಾರನಿಂದ
ಲಿಖಿತವಾಗಿರುವ ಆಚಣ್ಣನ 'ವರ್ಧಮಾನ ಪುರಾಣ' ಶಕ ೧೪೯೧ (ಕ್ರಿ.ಶ.
೧೫೬೯) ಮತ್ತು ಅಗ್ಗಳನ 'ಚಂದ್ರಪ್ರಭಪುರಾಣ' ಶಕ ೧೪೯೪ (ಕ್ರಿ.ಶ. ೧೫೭೨)
ಹಸ್ತಪ್ರತಿಗಳು ಪ್ರಾಚೀನವಾದುವಾಗಿವೆ. ಈ ಮೂರೂ ಪ್ರತಿಗಳು
ಮೂಡಬಿದರೆಯ ಜೈನ ಧರ್ಮಶಾಲೆಯ ಹಸ್ತಪ್ರತಿಭಂಡಾರದಲ್ಲಿವೆ. ನಾಗವರ್ಮನ
'ವರ್ಧಮಾನ ಪುರಾಣ'ದ ಮೈಕ್ರೋಫಿಲಂ ಮತ್ತು ಫೋಟೋಸ್ಟ್ಯಾಟ್ ಪ್ರತಿಗಳು
ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯಲ್ಲಿವೆ. ಈ ಪ್ರತಿಯನ್ನು ೧೯೭೩ರಲ್ಲಿ
ಮೈಕ್ರೊಫಿಲಂ ಮತ್ತು ಫೋಟೋಸ್ಟ್ಯಾಟ್ ಪ್ರತಿಗಳು ಮೈಸೂರಿನ ಕನ್ನಡ
ಅಧ್ಯಯನ ಸಂಸ್ಥೆಯಲ್ಲಿವೆ. ಈ ಪ್ರತಿಯನ್ನು ೧೯೭೩ರಲ್ಲಿ ಮೈಕ್ರೊಫಿಲಂ
ಮಾಡಿದಾಗ ಇದರ ಕಾಗದ ಎಂತಹ ಸ್ಥಿತಿಯಲ್ಲಿತ್ತೆಂದರೆ ಕೆಲವು ಭಾಗಗಳಲ್ಲಿ
ಬೆರಳಿಟ್ಟ ಭಾಗದ ಕಾಗದ ಬೆರಳಿಗೇ ಅಂಟಿಬರುತ್ತಿದ್ದಿತು.

ಹೀಗೆ ವಿವಿಧ ವಸ್ತುಗಳ ಮೇಲೆ ಸಾಹಿತ್ಯನಿರೂಪಣೆಯಾಗಿದ್ದರೂ,

---

2. ಹಸ್ತಪ್ರತಿಶಾಸ್ತ್ರ ; ಪು. ೧೨

ಕೈಯಿಂದ ಬರೆದ ಎಲ್ಲ ಲೇಖನಗಳಿಗೂ 'ಹಸ್ತಪ್ರತಿ' ಎಂಬ ಮಾತನ್ನು ಅನ್ವಯಿಸಬಹುದಾದರೂ ಹೆಚ್ಚು ವ್ಯಾಪಕವಾಗಿ ದೊರೆಯುವ ಹಸ್ತಪ್ರತಿಗಳೆಂದರೆ ತಾಳಪತ್ರ ಮತ್ತು ಕಾಗದಗಳೇ.

**ಮಸಿ ಮತ್ತು ಲೇಖನಿ :** ಹಸ್ತಪ್ರತಿಗಳನ್ನು ತಯಾರಿಸಲು ಉಪಯೋಗಿಸುತ್ತಿದ್ದ ವಸ್ತುಗಳ ಬಗೆಗೆ ಈಗಾಗಲೆ ತಿಳಿದುಕೊಂಡಿದ್ದೇವೆ. ಆ ವಸ್ತುಗಳ ಮೇಲೆ ಬರೆಯಲು ಬಳಸುತ್ತಿದ್ದ ಮಸಿ ಮತ್ತು ಲೇಖನಿಗಳ ವಿಷಯ ವಾಗಿಯೂ ಸ್ವಲ್ಪ ವಿವೇಚಿಸುವುದು ಉಚಿತವಾಗಿದೆ.

ಯಾವುದೇ ವಸ್ತುವಿನ ಮೇಲೆ ಬರೆಯುವಾಗ ಅಕ್ಷರಗಳು ಸ್ಫುಟವಾಗಿ ಕಾಣಬೇಕಾದುದು ಆವಶ್ಯಕ. ಅಂತೆಯೇ ಕಪ್ಪುವಸ್ತುವಿನ ಮೇಲೆ ಬಿಳಿಯ ಅಕ್ಷರಗಳೂ, ಬಿಳಿದರ ಮೇಲೆ ಕಪ್ಪು ಅಕ್ಷರಗಳೂ ಬರಬೇಕಾದುದು ಸಾಮಾನ್ಯ ವಾಗಿದೆ. ಶಿಲೆ ಲೋಹ ಮತ್ತು ಸ್ಫಟಿಕದ ಮೇಲೆ ಅಕ್ಷರಗಳನ್ನು ಕೊರೆಯು ತ್ತಿದ್ದುದರಿಂದ ಇವುಗಳಿಗೆ ಯಾವ ವಸ್ತುವನ್ನೂ ಹಚ್ಚಿ ಬಣ್ಣದವನ್ನಾಗಿ ಮಾಡುವ ಅವಶ್ಯಕತೆಯಿಲ್ಲವೆಂದು ತೋರುತ್ತದೆ. ಚರ್ಮದ ಮೇಲೆ ಹೇಗೆ ಬರೆಯುತ್ತಿದ್ದರೆಂದು ಹೇಳಲು ನಮಗೆ ಇದರ ಮಾಹಿತಿ ಯಾವುದೂ ದೊರೆತಿರುವುದಿಲ್ಲ. ಮರದಿಂದ ಮಾಡಿದ ಹಲಗೆಗಳ ಮೇಲೆ ಕಪ್ಪು ಬಣ್ಣ ಬಳಿದು ಬಳಪದಿಂದ ಬರೆಯುತ್ತಿದ್ದರೆಂದು ಹೇಳುತ್ತಾರೆ. ಭೂರ್ಜ ಪತ್ರದ ಮೇಲೆ ಲೇಖನಿಯನ್ನು ಮಸಿಯಲ್ಲಿ ಅದ್ದಿ ಬರೆಯುತ್ತಿದ್ದರು. ಇದು ಕಾಗದದಂತೆ ತೆಳು ವಾಗಿರುವುದರಿಂದ ಕಂಟದಿಂದ ಕೊರೆಯುವ ಅಥವಾ ಕೆರೆಯುವ ಹಾಗಿರಲಿಲ್ಲ.

ಹೀಗೆ ಮಸಿಯನ್ನು ಪಯೋಗಿಸಿ ಲೇಖನಿಯಿಂದ ಬರೆದ ತಾಳಪತ್ರದ ಹಸ್ತ ಪ್ರತಿಗಳೂ ಕೆಲವು ನಮಗೆ ದೊರೆಯುತ್ತವೆ. ಇಂತಹವುಗಳು ಅಪರೂಪವಾಗಿರಲು ಇದರ ಅಕ್ಷರಗಳು ಸುಲಭವಾಗಿ ಅಳಿಸಿಹೋಗುವುದು ಮುಖ್ಯ ಕಾರಣವಾಗಿದೆ. ಹೆಚ್ಚು ತಾಳಪತ್ರಗಳೆಲ್ಲವೂ ಕಬ್ಬಿಣದ ಸಲಾಕೆಯಂತಹ ಕಂಟದಿಂದ ಅಕ್ಷರಗಳನ್ನು ಕೆರೆದ ಅಥವಾ ಕೊರೆದಂತಹುವಾಗಿವೆ. ಹೀಗೆ ಕೊರೆದ ಅಕ್ಷರಗಳಿಗೆ ಮಸಿಯನ್ನು ಬಳಿಯುವುದರಿಂದ ಆಯಾ ಗೆರೆಗಳಿಗೆ ಮಸಿಯು ಕುಳಿತು ಅಕ್ಷರಗಳು ಕಪ್ಪಾಗಿ ಓದಲು ಸುಲಭವಾಗಿರುತ್ತದೆ. ಕಾಗದದ ಮೇಲೆ ಬರೆಯಲು ಲೇಖನಿ ಮಸಿಗಳೇ ಆಧಾರವಾಗಿವೆ.

"ಕ್ರಿ.ಪೂ. ೪ನೆಯ ಶತಮಾನದಲ್ಲಿಯೇ ಭೂರ್ಜಪತ್ರಗಳ ಮೇಲೆ ಮಸಿಯಿಂದ ಬರೆಯುತ್ತಿದ್ದರು... ಮಸಿಯಿಂದ ಬರೆದಿರುವ ಅತಿಪ್ರಾಚೀನ ಲಿಖಿತ ಅಂದೇರ್ ಎಂಬಲ್ಲಿದೆ ; ಒಂದು ಕುಡಿಕೆಯ ಮುಚ್ಚಳದ ಮೇಲೆ ಲಿಪಿ ಲಿಖಿತವಾಗಿದೆ. ಇದು ಕ್ರಿ.ಪೂ. ೨ನೆಯ ಶತಮಾನಕ್ಕೆ ಸೇರಿದ್ದು. ಖರೋಷ್ಠೀ ಲಿಪಿಯಲ್ಲಿ ಮಸಿಯಿಂದ ಬರೆದ 'ಧಮ್ಮಪದ'ದ ಪ್ರತಿ ಖೋಟಾನಿನಲ್ಲಿ ದೊರೆತದ್ದು, ಕ್ರಿ.ಶ. ೧ನೆಯ ಶತಮಾನದಷ್ಟು ಪ್ರಾಚೀನ. ತಾಳೆಯಗರಿಗಳ ಮೇಲೆ ಮಸಿಯಿಂದ ಬರೆಯುವ ಪದ್ಧತಿ ಉತ್ತರ ಭಾರತದಲ್ಲಿ ವಿಶೇಷವಾಗಿತ್ತು ; ದಕ್ಷಿಣ ಭಾರತದಲ್ಲಿ ಇರಲಿಲ್ಲವೆಂದು ತೋರುತ್ತದೆ. ಏಕೆಂದರೆ ಅಂಥ ತಾಳಪತ್ರಗಳು ಸಿಕ್ಕಿಲ್ಲ ಇದುವರೆಗೆ"1 ಎಂದು ಡಿ. ಎಲ್. ನರಸಿಂಹಾಚಾರ್ ಹೇಳುತ್ತಾರೆ. ಆದರೆ ಮೂಡಬಿದರೆಯ ಜೈನಸಿದ್ಧಾಂತ ಭವನದಲ್ಲಿ ರಕ್ಷಿತವಾಗಿರುವ 'ಧವಳ' ಮಹಾಗ್ರಂಥ ಮಸಿಯನ್ನುಪಯೋಗಿಸಿ ಲೇಖನಿಯಿಂದ ಬರೆದುದಾಗಿದೆಯೆಂಬುದು ಅವರ ಗಮನಕ್ಕೆ ಬಂದಂತೆ ಕಾಣುವುದಿಲ್ಲ.

ಈ ಮಸಿಯನ್ನು ರಾಗಿ, ಅಳಲೆಕಾಯಿ, ಅನ್ನಭೇದಿ ಮೊದಲಾದ ವಸ್ತುಗಳಿಂದ ತಯಾರಿಸುತ್ತಿದ್ದರೆಂಬುದು ತಿಳಿದುಬರುತ್ತದೆ. ಇದರ ಉಪಯೋಗವೂ ಸಾಕಷ್ಟು ಪ್ರಾಚೀನವಾಗಿದೆ. 'ಗದಾಯುದ್ಧ'ದಲ್ಲಿ ಬರುವ 'ಶರಮೊಂದಂ ತೆಗೆದು ನಿಜೋದರದಿಂ ಲೆಕ್ಕಣಿಕೆಮಾಡಿ ಗಜಮದಮಸಿಯಂ ತರಿಸಿ ಪತಾಕಪಟದೊಳ್ ಬರೆದಟ್ಟಿದನ್' (೬-೨) ಎಂಬ ವಾಕ್ಯದಿಂದಲೂ, 'ವೊಡ್ಡಾರಾಧನೆ'ಯಲ್ಲಿ ಉದ್ಧೃತವಾಗಿರುವ 'ಉಪಾಧ್ಯಾಯಂ ಶಾಲಿ ಕೂರಂ ಚ ಮಶೀಘೃತಂ ಚ ದತ್ವಾ ಕುಮಾರಮಧ್ಯಾಪಯೇತ್' ಎಂಬುದರಿಂದಲೂ ಈ ವಿಷಯ ವಿಶದವಾಗುತ್ತದೆ. ಮಸಿಯಲ್ಲಿ ಅದ್ದಿ ಬರೆಯಲು ಲಾಳದ ಕಡ್ಡಿ, ಮುಳ್ಳುಹಂದಿಯ ಮುಳ್ಳು, ಬಿದಿರಿನ ಸೀಳು, ನವಿಲುಗರಿಯ ಕಾಂಡ ಮೊದಲಾದುವನ್ನು ಬಳಸುತ್ತಿದ್ದರು ಎಂದು ಡಿ.ಎಲ್.ಎನ್. ಅವರು ವಿವರಿಸುತ್ತಾರೆ.

1. ಕ ಗ್ರಂ.ಸಂ. ; ಪು. ೪೧-೪೩

# ಹಸ್ತಪ್ರತಿಸ್ವರೂಪ ಮತ್ತು ವಿಂಗಡಣೆ

ಹಸ್ತಪ್ರತಿಗಳ ಬರವಣಿಗೆ, ಲಿಪಿಕಾರರ ಆದರ್ಶತೆ, ತೋರಿಸಿರುವ ಕೈಚಳಕ ಹಾಗೂ ಹಸ್ತಪ್ರತಿಗಳ ವಿಂಗಡಣೆಯ ಬಗೆಗೆ ಇಲ್ಲಿ ವಿವೇಚಿಸುವುದು ವಿಹಿತವೆಂದು ಭಾವಿಸಿದ್ದೇನೆ. 'ವೀರನಾರಾಯಣನೆ ಕವಿ ಲಿಪಿಕಾರ ಕುವರವ್ಯಾಸ' ಎಂದು ಕುಮಾರವ್ಯಾಸ ಅಥವಾ ಗದುಗಿನ ನಾರಣಪ್ಪ ಹೇಳುವಂತೆ ಸ್ವತಃ ಕವಿಗಳೇ ಲಿಪಿಕಾರರಾಗಿರುವುದುಂಟು. ಆದರೆ ಹೀಗೆ ತಮ್ಮ ಗ್ರಂಥಗಳನ್ನು ತಾವೇ ಲಿಖಿಸಿದಂತಹ ಕವಿಗಳು ತಮ್ಮ ತಮ್ಮ ಕೃತಿಗಳ ಒಂದೊಂದು ಪ್ರತಿಗೆ ಮಾತ್ರ ಲಿಪಿಕಾರರಾಗಿದ್ದಾರೆ. ಇಂತಹ ಹಸ್ತಪ್ರತಿಗಳು ೧೯ನೆಯ ಶತಮಾನದ ಕೊನೆಯ ವರೆಗೂ ನಮಗೆ ದೊರೆತಿರುವುದಿಲ್ಲ ; ಬೇರೆ ಲಿಪಿಕಾರರಿಂದ ಆದ ಪ್ರತಿಗಳು ಮಾತ್ರ ಲಭ್ಯವಾಗಿವೆ. ರಚನೆಯಾದ ಗ್ರಂಥಗಳನ್ನು ಆಸಕ್ತರು ಪ್ರತಿ ಮಾಡಿಸಿಕೊಳ್ಳುತ್ತಿದ್ದುದಲ್ಲದೆ ಶಾಸ್ತ್ರದಾನದಿಂದಲೂ ಪ್ರತಿಗಳು ಹುಟ್ಟಿಕೊಂಡುವು. ೧೦ನೆಯ ಶತಮಾನದಲ್ಲಿದ್ದ ಪೊನ್ನನ 'ಶಾಂತಿನಾಥ ಪುರಾಣ'ದ ಒಂದು ಸಾವಿರ ಹಸ್ತಪ್ರತಿಗಳನ್ನು ಮಾಡಿಸಿದ ಅತ್ತಿಮಬ್ಬೆಯ ಆಶ್ರಯದಲ್ಲಿ ಅದೆಷ್ಟು ಜನ ಲಿಪಿಕಾರರು ಕೆಲಸಮಾಡಿರಬಹುದು. ಹೀಗಾಗಿ ಹವ್ಯಾಸಿ ಲಿಪಿಕಾರರಲ್ಲದೆ ವೃತ್ತಿ ನಿರತ ಲಿಪಿಕಾರರೂ ಇದ್ದರು. ಲಿಪಿಕಾರ ವೃತ್ತಿಯನ್ನೇ ಅವಲಂಬಿಸಿದ್ದ ಕೆಲವರು ಅದರಿಂದಲೇ ತಮ್ಮ ಜೀವನವನ್ನು ನಡೆಸುತ್ತಿದ್ದರೆಂದು ತೋರುತ್ತದೆ. ಇವರ ಜತೆಗೆ ನಿಯುಕ್ತ ಲಿಪಿಕಾರರು ಇರುತ್ತಿದ್ದರು. ಆದುದರಿಂದಲೇ ಒಬ್ಬರೇ ಪ್ರತಿ ಮಾಡಿದ ಹಲವು ಗ್ರಂಥಗಳು ನಮಗೆ ದೊರೆಯುತ್ತವೆ.

ಗುಂಡಾಗಿ ಮುದ್ದಾಗಿರುವ ಅಕ್ಷರಗಳಂತೆಯೇ ಕೋಳಿಗೀಚಿದಂತೆ ಬರೆದ, ಓದಲು ಬಲುಕಷ್ಟವಾದ ಮೋಡಿ ಅಕ್ಷರಗಳೂ ಇವೆ. ಹಾಗೆಯೆ ದೊಡ್ಡ ಅಕ್ಷರಗಳಿಂದ ಅತಿ ಸೂಕ್ಷ್ಮಲಿಪಿಯನ್ನು ಹೊಂದಿರುವ ಹಸ್ತಪ್ರತಿಗಳೂ ಇವೆ. ಕ್ರಿ.ಶ. ೧೨೩೫ ರಲ್ಲಿದ್ದ ಗುಣವರ್ಮನ 'ಪುಷ್ಪದಂತ ಪುರಾಣ'ದ ೨೨.೧ ಇಂಚು ಉದ್ದದ ಓಲೆಯ ಒಂದು ಪಂಕ್ತಿಯಲ್ಲಿ ಸರಾಸರಿ ೧೧೫ ಅಕ್ಷರಗಳಿದ್ದು ಗುಂಡಾಗಿ ಸ್ಫುಟ

ವಾಗಿವೆ. ಇದನ್ನು ಶಕ ೧೩೫೮ (ಕ್ರಿ.ಶ. ೧೪೩೬)ರಲ್ಲಿ ಪ್ರತಿ ಮಾಡಲಾಗಿದೆ. ಹಾಗೆಯೇ ಸುಲಭವಾಗಿ ಓದಲು ಸಾಧ್ಯವಾಗದಂತಹ ಕೆಲವು ಬರಹಗಳೂ ಇವೆ. ಮೋಡಿಲಿಪಿ ಎಂಬಂತಹ ಬರವಣಿಗೆಯನ್ನು ಶಕ ೧೬೮೫ರಲ್ಲಿ ಪ್ರತಿ ಮಾಡಿದ 'ಕೆಳದಿನೃಪ ವಿಜಯ' (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು)ದಂತಹ ಕಾಗದದ ಹಸ್ತಪ್ರತಿಗಳಲ್ಲಿಯೂ ಕಾಣಬಹುದು. ಪ್ರಾಚ್ಯವಿದ್ಯಾ ಸಂಶೋಧನಾಲಯ ದಲ್ಲಿರುವ 'ದೇವೀಸ್ತೋತ್ರ' ಮತ್ತು ರಾಮಾಯಣದ 'ಸುಂದರ ಕಾಂಡ' ಹಸ್ತ ಪ್ರತಿಗಳು ಸೂಕ್ಷ್ಮಲಿಪಿಗೆ ಪ್ರಸಿದ್ಧವಾಗಿವೆ. 'ದೇವೀಸ್ತೋತ್ರ'ದ ೨.೫ ಇಂಚು ಬರವಣಿಗೆಯ ಅಳತೆಯಲ್ಲಿ ೨೫ ಅಕ್ಷರಗಳನ್ನು ಕೊರೆದಿದ್ದಾರೆ ; ೧.೫ ಇಂಚು ಅಗಲದಲ್ಲಿ ೧೮–೨೩ ಪಂಕ್ತಿಗಳಿವೆ. ಇದು ತೆಲುಗು ಲಿಪಿಯಲ್ಲಿದೆ. 'ಸುಂದರ ಕಾಂಡ'ದ ಪ್ರತಿಪತ್ರ ೪.೫ × ೧.೭೫ ಇಂಚು ಅಳತೆಯುಳ್ಳದ್ದಾಗಿದ್ದರೂ ಬರವಣಿಗೆಯ ಭಾಗದ ೩.೭೫ × ೧.೫ ಇಂಚು ಅಳತೆಯಲ್ಲಿ ೨೧–೨೫ ಸಾಲುಗಳೂ ಪ್ರತಿ ಸಾಲಿನಲ್ಲಿ ಸರಾಸರಿ ೪೭ ಅಕ್ಷರಗಳೂ ಇವೆ. ಇವುಗಳ ಜತೆಗೆ ಇದೇ ಮಾದರಿ ಯಲ್ಲಿ ಬರೆದಿರುವ, ಹೆಸರು ತಿಳಿಯದ ಯಾವುದೋ ಗ್ರಂಥದ ಒಂದು ಓಲೆ ಮಾತ್ರ ದೊರೆತಿರುವ ೧೮ × ೧.೨೫ ಇಂಚು ಅಳತೆಯಲ್ಲಿ ೨೨ ಪಂಕ್ತಿಗಳೂ ೪೨೦ ಅಕ್ಷರಗಳೂ ಇವೆ ಎಂದಾಗ ಬೆರಗು ಹುಟ್ಟಿ ಕುತೂಹಲವಾಗುವುದು ಸಹಜವಾಗಿದೆ.

ಇವೇ ಅಲ್ಲದೆ ನಕಲುಗಳನ್ನು ಮಾಡುವಾಗ್ಗೆ ವಿವಿಧ ಪ್ರತಿಕಾರರು ಭಿನ್ನ ಭಿನ್ನ ರೀತಿಯಲ್ಲಿ ಬರವಣಿಗೆ ಮಾಡಿದ್ದಾರೆ. ಆಯಾ ಭಾಷಾ ಗ್ರಂಥಗಳಿಗೆ ಆಯಾ ಭಾಷಾ ಲಿಪಿಯನ್ನೇ ಸಾಮಾನ್ಯವಾಗಿ ಉಪಯೋಗಿಸಿದರೂ ಓದುಗರ ಇಚ್ಛೆಗೆ ಅನುಸಾರವಾಗಿ, ಆಯಾ ಪ್ರಾಂತ್ಯದ ವಿಭಾಗದ ಜನರ ರೂಢಿಗೆ ತಕ್ಕಂತೆ ಕನ್ನಡ ತೆಲುಗು, ತುಳು, ತಿಗಳಾರಿ, ನಾಗರಿ, ನಂದಿನಾಗರಿ ಗ್ರಂಥ ಮೊದಲಾದ ಹಲವಾರು ಲಿಪಿಗಳನ್ನು ಕನ್ನಡ, ಸಂಸ್ಕೃತ ಎಲ್ಲ ಭಾಷೆಯ ಗ್ರಂಥಗಳಲ್ಲೂ ಬಳಸಿರುವುದು ಕಂಡುಬರುತ್ತದೆ. ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ 'ಕರ್ಣಾಟಕ ಭಾಷಾಭೂಷಣ' ಹಸ್ತಪ್ರತಿಯು ಈ ಮಾದರಿಗೆ ಅತ್ಯಂತ ಉತ್ತಮ ನಿದರ್ಶನವಾಗಿದೆ. ಇದರಲ್ಲಿ ನೋಡುವುದು ಮಲೆಯಾಳಿ ಲಿಪಿಯನ್ನು, ಓದುವುದು ಸಂಸ್ಕೃತ ಭಾಷೆಯನ್ನು, ತಿಳಿಯುವುದು ಕನ್ನಡ ವ್ಯಾಕರಣವನ್ನು ಎಂದಾಗ ಹಲವರು ಆಶ್ಚರ್ಯಪಡುವುದು ಸಹಜವಾಗಿದೆ.

ಇದರ ಜೊತೆಗೆ ಕೆಲವು ಹಸ್ತಪ್ರತಿಗಳು ವಿವಿಧ ರೀತಿಯ ಬರವಣಿಗೆಗಳಿಂದ

ಚಿತ್ರಗಳಿಂದ ಅಲಂಕೃತವಾಗಿರುವುದುಂಟು. ಅಕ್ಷರಗಳನ್ನೇ ಸಾಲಂಕೃತವಾಗಿ ಮಾಡುವುದು, ಪುಟಪುಟಕ್ಕೂ ಸುಂದರ ಚೌಕಟ್ಟನ್ನು ಕಟ್ಟುವುದು, ವಿಷಯಕ್ಕೆ ತಕ್ಕಂತೆ ಚಿತ್ರಗಳನ್ನು ಬಿಡಿಸುವುದು, ಮೇಲು ಹೊದಿಕೆಯನ್ನು ರೇಖಾ ಹಾಗೂ ವರ್ಣಚಿತ್ರಗಳಿಂದ ಅಲಂಕರಿಸುವುದು ಲಿಪಿಕಾರರ ಕಲಾಕೌಶಲಕ್ಕೆ ನಿದರ್ಶನವಾಗಿವೆ. ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ರಾಜನೀತಿಗಳನ್ನೊಳಗೊಂಡ ಕೆಲವು ಪತ್ರಗಳಲ್ಲಿ ವಿವಿಧ ರೀತಿಯ ಸಾಲುಜೋಡಿಗಳನ್ನು ನೋಡಬಹುದು. ವಿವಿಧ ದಿಕ್ಕುಗಳಿಂದ ಓದಬಹುದಾದ ಈ ಬರೆಹ ಚಮತ್ಕಾರಯುಕ್ತವಾಗಿದೆ.

ಏಳು ಸಾವಿರ ವರ್ಷವೆಂದು ಹೇಳುವ ಈಜಿಪ್ಟಿನ ಪಪೈರಸ್ ಸುರುಳಿಗಳು ಸುರುಳಿಗಳು ರೇಖಾ ಹಾಗೂ ಜಲವರ್ಣ ಚಿತ್ರಗಳನ್ನೊಳಗೊಂಡಿವೆ. ಈ ಮಾದರಿಯ ಒಂದು ಹಸ್ತಪ್ರತಿ ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿದೆ. ಕ್ರಿ.ಶ. ೪ನೆಯ ಶತಮಾನದ ರೋಮನ್ ಪ್ರತಿ ಹೋಮರನ 'ಇಲಿಯಡ್' ಕಾವ್ಯ ಅಮ್ರೊಬ್ರಿಸಿಯಾನ ಗ್ರಂಥಾಲಯದಲ್ಲಿದೆ. ಇದರಲ್ಲಿ ೫೨ ವರ್ಣಾಲಂಕೃತ ಚಿತ್ರಗಳಿವೆ. ಇದೇ ಕಾಲದ ಇನ್ನೊಂದು ರೋಮನ್ ಪ್ರತಿಯೆಂದರೆ ವರ್ಜಿಲ್ ಆಫ್ ದಿ ವ್ಯಾಟಿಕನ್.

ಈಗ ತಿಳಿದುಬರುವಂತೆ ಓಲೆಯ ಅತ್ಯಂತ ಹಳೆಯ ಚಿತ್ರಾಲಂಕೃತ ಹಸ್ತಪ್ರತಿಯೆಂದರೆ ೧೯೬೨ರಲ್ಲಿ ನ್ಯೂಯಾರ್ಕ್ ನಗರದಲ್ಲಿ ಪ್ರದರ್ಶಿತವಾದ ಸಂಸ್ಕೃತ ಗ್ರಂಥ. ಇದು ಬೌದ್ಧರ ಪ್ರಾರ್ಥನಾಗೀತೆಗಳನ್ನೊಳಗೊಂಡಿದ್ದು ಚಿತ್ರಗಳು ಅಜಂತ ಕಲೆಯನ್ನು ಹೋಲುತ್ತವೆಂದು ಹೇಳುತ್ತಾರೆ. ಈಗ ಕರ್ನಾಟಕದಲ್ಲಿಯೇ ದೊರೆಯುವ ಮತ್ತೊಂದು ಪ್ರತಿಯೆಂದರೆ ಸು. ೧೧ನೇ ಶತಮಾನದಲ್ಲಿ ಲಿಖಿತವಾಗಿರುವ 'ಧವಳ' ಮಹಾಗ್ರಂಥ. ಇದರಲ್ಲಿ ಧವಳ ಜಯಧವಳ, ಮಹಾಧವಳವೆಂಬ ಮೂರು ಭಾಗಗಳಿದ್ದು ಮೂರರಲ್ಲಿಯೂ ಕ್ರಮವಾಗಿ ೭೭೭, ೫೧೮, ೨೧೯ ಓಲೆಗಳಿವೆ. ಅರ್ಧಮಾಗಧಿ ಭಾಷೆಯಲ್ಲಿ ರಚಿತವಾಗಿ ಕನ್ನಡ ಲಿಪಿಯಲ್ಲಿ ಮೂರ್ತೀಭವಿಸಿರುವ ಈ ಪ್ರತಿಯಲ್ಲಿ ಕಾಲ ನಮೂದಿತ ಭಾಗವನ್ನು ಅಳಿಸಲಾಗಿದೆ. ಇದರ ಉದ್ದೇಶ ಅವ್ಯಕ್ತವಾಗಿದ್ದರೂ ಲಿಪಿಯ ವೈಶಿಷ್ಟ್ಯದಿಂದ ಇದು ಪ್ರಾಚೀನವಾದುದೆಂದು ಒಪ್ಪಬಹುದಾಗಿದೆ. ಮೂಡಬಿದರೆಯಲ್ಲಿ ಸಿದ್ಧಾಂತ ದರ್ಶನಕ್ಕೆ ಮೀಸಲಾಗಿರುವ ಈ ಗ್ರಂಥದಲ್ಲಿ ಅತ್ಯುತ್ತಮ ರೇಖಾ ಹಾಗೂ ವರ್ಣರಂಜಿತ ಚಿತ್ರಗಳಿವೆ. ಇದರ ಮೈಕ್ರೊಫಿಲಂ

ಪ್ರತಿ ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿದ್ದರೂ ಇದರಲ್ಲಿ ಚಿತ್ರಗಳು ಕಪ್ಪು-ಬಿಳುಪು ಮಾತ್ರವಾಗಿವೆ. ಇಲ್ಲಿನ ಜೈನಧರ್ಮಶಾಲೆಯಲ್ಲಿರುವ ಮತ್ತೊಂದು ರೇಖಾಚಿತ್ರಗಳಿರುವ ಹಸ್ತಪ್ರತಿಯೆಂದರೆ ನೇಮಿಚಂದ್ರನ 'ನೇಮಿನಾಥಪುರಾಣ'.1 ಈ ಚಿತ್ರಗಳನ್ನು ವಿಷಯಕ್ಕೆ ತಕ್ಕಂತೆ ಮಧ್ಯೆಮಧ್ಯೆ ಓಲೆಗಳಲ್ಲಿ ಕೊರೆಯಲಾಗಿದೆ. ಕ.ಅ. ಸಂಸ್ಥೆಯಲ್ಲಿರುವ 'ವೀರಶೈವಾಮೃತ ಮಹಾಪುರಾಣ' ಓಲೆಪ್ರತಿಯಲ್ಲಿ ಹಲವಾರು ರೇಖಾಚಿತ್ರಗಳನ್ನು ಬಿಡಿಸಲಾಗಿದೆ. ಮತ್ತೂ ಕೆಲವು ಚಿತ್ರಾಲಂಕೃತ ಓಲೆ ಗ್ರಂಥಗಳು ಕ.ಅ. ಸಂಸ್ಥೆ ಮತ್ತು ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿವೆ.

ಕಾಗದ ಬಳಕೆಗೆ ಬಂದಮೇಲೆ ಕ್ರಿ.ಶ. ೧೫೫೦ರಲ್ಲಿ ಬರೆದ ಜೈನ ನಿಯಮಾವಳಿಗಳನ್ನೊಳಗೊಂಡ 'ಕಲ್ಪಸೂತ್ರ' ಕಾಗದದ ಹಸ್ತಪ್ರತಿಯಲ್ಲಿ ಪಶ್ಚಿಮ ದೇಶದ ರೇಖಾವಿನ್ಯಾಸಗಳುಳ್ಳ ಭಾರತೀಯ ಚಿತ್ರಗಳಿವೆ. ೧೬ನೇ ಶತಕದಲ್ಲಿ ಅಕ್ಬರನಿಗಾಗಿ ರಚಿತವಾದ 'ಅಬ್ದುಲ್ ರಹೀಮ್' ಗ್ರಂಥವು ೩೬ ಚಿತ್ರಗಳಿಂದ ಕೂಡಿದೆ. ಕ್ರಿ.ಶ. ೧೫೬೭ರಲ್ಲಿ ಪ್ರಸಿದ್ಧ ಕನ್ನಡ ಲಿಪಿಕಾರ ಪಾಯಣ್ಣನಿಂದ ನಕಲಾದ ೨ನೆಯ ನಾಗವರ್ಮನ 'ವರ್ಧಮಾನ ಪುರಾಣ'ದಲ್ಲಿ ಕೆಲವು ವರ್ಣರಂಜಿತ ಹಾಳೆಗಳನ್ನು ನೋಡಬಹುದು. ೧೮೫೦ರಲ್ಲಿದ್ದ ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ರಚಿತವಾದ 'ಶ್ರೀತತ್ವನಿಧಿ' ಹಸ್ತಪ್ರತಿಯು ೪ ಸಾವಿರ ವರ್ಣಚಿತ್ರಗಳನ್ನೂ ಹಲವಾರು ರೇಖಾಚಿತ್ರಗಳನ್ನೂ ಒಳಗೊಂಡಿದ್ದು ಬಹು ಪ್ರಸಿದ್ಧಿಯನ್ನು ಪಡೆದಿದೆ. ಕ.ಅ. ಸಂಸ್ಥೆಯಲ್ಲಿರುವ 'ಚದುರಂಗ ಚಕ್ರ' ಹಸ್ತಪ್ರತಿಯಲ್ಲಿ ಪಗಡೆ, ಚದುರಂಗ ಗಂಜೀಫು ಮೊದಲಾದುವುಗಳ ಬಣ್ಣದ ಚಿತ್ರಗಳೂ ಅವುಗಳ ವಿವರಣೆಯೂ ಇದೆ. ಇಲ್ಲಿಯೇ ಇರುವ 'ಅಶ್ವಪರೀಕ್ಷೆ' ಎಂಬ ಹಸ್ತಪ್ರತಿಯಲ್ಲಿ ವಿವಿಧ ರೀತಿಯ ಕುದುರೆಗಳು, ಅವುಗಳ ಲಕ್ಷಣಗಳು ಇತ್ಯಾದಿ ವಿವರಗಳನ್ನು ೧೦೫ ಕುದುರೆಗಳ ವರ್ಣರಂಜಿತ ಚಿತ್ರಗಳೊಡನೆ ನೀಡಲಾಗಿದೆ. ಇದರಲ್ಲಿ ೨೦೩ ಕುದುರೆಗಳ ವಿವರಣೆಯಿದೆ. ಅಳಿಯ ಲಿಂಗರಾಜನ 'ಪ್ರಭಾವತೀ ಪರಿಣಯ' ಓಲೆ ಪ್ರತಿಯನ್ನು ಇಟ್ಟಿರುವ ಬೀಟೆಮರದ ಪೆಟ್ಟಿಗೆ ಮತ್ತು ಅದರ ಮೇಲಣ ದಂತದ ಕೆತ್ತನೆಯ ಕೆಲಸ ತುಂಬಾ

---

1. ಈ ಚಿತ್ರಗಳು 'ನೇಮಿನಾಥಪುರಾಣ', ಸಂ. : ಬಿ. ಎಸ್. ಸಣ್ಣಯ್ಯ, ೧೯೬೧. ಇದರಲ್ಲಿ ಪ್ರಕಟವಾಗಿವೆ.

ಸೊಗಸಾಗಿದೆ. ಭೀಮಕವಿಯ 'ಬಸವಪುರಾಣ'ದ ಹಸ್ತಪ್ರತಿಯೊಂದರಲ್ಲಿ ಪ್ರತಿ ಪುಟವನ್ನೂ ವಿವಿಧ ವಿನ್ಯಾಸದ ಬಣ್ಣದ ಚೌಕಟ್ಟುಗಳಿಂದ ಅಲಂಕರಿಸಿರುವುದು ಶ್ಲಾಘನೀಯವಾಗಿದೆ. ಇದರ ಹೊರ ರಕ್ಷಣಾ ಹಲಗೆಗಳ ಮೇಲಿರುವ ವರ್ಣರಂಜಿತ ಚಿತ್ರಗಳು ಸುಂದರವಾಗಿವೆ.

ಹೀಗೆ ವಿವಿಧ ರೀತಿಯ ಬರವಣಿಗೆಯನ್ನೂ ಮತ್ತು ಒಂದೇ ಕೃತಿಯ ಹಲವಾರು ಪ್ರತಿಗಳನ್ನು ನಾವು ಕಾಣುತ್ತಿರುವುದು ಗ್ರಂಥಗಳನ್ನು ನಕಲುಮಾಡಿ ಜನರು ಉಪಯೋಗಿಸುತ್ತಿದ್ದುದರಿಂದ. ನಕಲುಗಳನ್ನೆತ್ತಿದ ಕೆಲವು ಪ್ರತಿಕಾರರು ಹಸ್ತಪ್ರತಿಗಳ ಮೊದಲಲ್ಲಿ ತಮ್ಮ ಇಷ್ಟದೈವಗಳನ್ನು ನೆನೆಯುವುದಲ್ಲದೆ, ಕೊನೆಯಲ್ಲಿ ತಮ್ಮ ಪ್ರವರಗಳನ್ನೂ ತಿಳಿಸಿ, ಪ್ರತಿಮಾಡಿದ ಕಾಲನಿರ್ದೇಶನವನ್ನೂ ಮಾಡಿದ್ದಾರೆ ; ತಪ್ಪಿದ್ದರೆ ತಿದ್ದಿಕೊಳ್ಳಿರೆಂದು ಪ್ರಾರ್ಥಿಸಿದ್ದಾರೆ. ಇದೆಲ್ಲದಕ್ಕಿಂತಲೂ ಮುಖ್ಯವಾಗಿ ಪ್ರತಿಗಳನ್ನು ಮಾಡುವವರು ಬಹು ಪ್ರಾಮಾಣಿಕರಾಗಿರಬೇಕು : ಇಲ್ಲದಿದ್ದಲ್ಲಿ ಮೂಲ ಉದ್ದೇಶವೇ ಈಡೇರಿದಂತಾಗುವುದಿಲ್ಲ. ಅತ್ತಿಮಬ್ಬೆಯು 'ಶಾಂತಿನಾಥ ಪುರಾಣ'ದ ಒಂದು ಸಾವಿರ ಪ್ರತಿಗಳನ್ನು ಮಾಡಿಸುವಾಗ್ಗ ಲಿಪಿಕಾರರಿಂದ ವಿವಿಧ ರೀತಿಯ ಬರೆಹವಿರಬಹುದು. ಆದರೆ ಮೂಲದ ಯಥಾವತ್ತು ನಕಲಾಗುವುದು ಅತ್ಯಂತ ಮಹತ್ತ್ವಪೂರಿತವಾದುದು : ಅಲಸಿಕೆಯವರಾಗಿದ್ದರೆ, ಬೇಗ ಮುಗಿಯಲೆಂದೊ ಅಥವಾ ಅನ್ಯತ್ರ ಯೋಚನೆಯಲ್ಲಿದ್ದೊ ಅಲ್ಲಿ ಇಲ್ಲಿ ಕೆಲವು ಅಕ್ಷರಗಳನ್ನೊ ಪದಗಳನ್ನೊ ಸಾಲುಗಳನ್ನೊ ಬಿಟ್ಟು ಪ್ರತಿ ಮಾಡಿರುವುದುಂಟು. ಮತ್ತೆ ಕೆಲವರು ತಾವೇ ಪ್ರೌಢರೆಂದು ಬಗೆದು ಮೂಲದಲ್ಲಿರುವುದು ತಪ್ಪೆಂದೆಣಿಸಿ ತಿದ್ದಿ ಬರೆದಿರುವುದೂ, ತಮ್ಮ ಸ್ವಂತ ರಚನೆಗಳನ್ನು ಸೇರಿಸಿರುವುದೂ ಇದೆ. ಇಂತಹ ಎಲ್ಲ ಕ್ಷುಲ್ಲಕ ಕೃತ್ಯಗಳಿಂದ ಪ್ರತಿಕಾರರು ದೂರವಿರುವುದು ಲೇಸು.

ಈ ಬಗೆಯ ಆದರ್ಶ ಎಷ್ಟರಮಟ್ಟಿಗೆ ಈಡೇರಿದೆ ಎಂದು ವಿಮರ್ಶಿಸಿದಾಗ ಕೆಲವರಾದರೂ ಆದರ್ಶ ಪ್ರತಿಕಕಾರರಾಗಿ ಕಂಗೊಳಿಸಿದ್ದಾರೆ.

**ಯಾದೃಶಂ ಪುಸ್ತಕಂ ದೃಷ್ಟ್ವಾ ತಾದೃಶಂ ಲಿಖಿತಂ ಮಯಾ**
**ಅಬದ್ಧೋ ವಾ ಸುಬದ್ಧೋ ವಾ ಮಮದೋಷೋ ನ ವಿದ್ಯತೇ ॥**
**ತಪ್ಪಂ ಬರೆದವ ಕಡು ಜಡ**
**ನಪ್ಪಾಂತಂ ಬರೆದನೆಂದು ಬಯ್ಯಲ್ ಬೇಡಿಂ**

ತಪ್ಪಕ್ಕು ಶುದ್ಧಮುಕ್ಕುಂ
ತಪ್ಪುಳ್ಳಡೆ ತಿದ್ದಿ ಕೊಂಬುದುತ್ತಮ ಪುರುಷರ್ ॥

ಎಂದು ವಿನಂತಿಸಿಕೊಂಡಿರುವುದನ್ನು ನೋಡಿದಾಗ ಮೂಲವನ್ನು ಚಾಚೂ ತಪ್ಪದೆ ಅನುಸರಿಸಿ ಬರೆಯಬೇಕೆಂಬ ಅವರ ಆಕಾಂಕ್ಷೆ ಹಾಗೂ ಅನವಧಾನದಿಂದ ಆಗುವ ತಪ್ಪಿಗೆ ಕ್ಷಮಾಪಣೆ ಕೇಳುವುದು ಉತ್ತಮ ಪ್ರತಿಕಾರರ ಲಕ್ಷಣವಾಗಿದೆ. ಪ್ರತಿಕಾರರಲ್ಲಿಯೂ ಮಹಾಪ್ರೌಢರೂ ಪ್ರತಿಭಾಸಂಪನ್ನರೂ ಇದ್ದರೆಂಬುದಕ್ಕೆ ಅವರು ಸ್ವವಿಷಯ ಹೇಳಿಕೊಳ್ಳುವಲ್ಲಿ, ಬರೆದ ರೀತಿಯನ್ನು ವರ್ಣಿಸುವಲ್ಲಿ ಕಾಣಬಹುದು. 'ವೀರಮಾಹೇಶ್ವರಾಚಾರ ಸಂಗ್ರಹ'ದ ಒಂದು ಪ್ರತಿಯನ್ನು ಬರೆದ ವಿರಕ್ತ ಅನ್ನದಾನ ದೇವರು ಗ್ರಂಥಾಂತ್ಯದಲ್ಲಿ ಕೊಟ್ಟಿರುವ–

"ಪಡುವಣ ದೆಸೆಯಿಂದೊಪ್ಪುತಿರ್ದ ಲವಣಾಂಬುಧಿಗೆ ಪುರ್ಬಿಂ ಪುಟ್ಟಿದ ಹಾಂಗಿರ್ದ ಘಟ್ಟದ ಸರೋವರಂಗಳಲ್ಲನೇಕ ಪಾದಚರ ಕೆದಜಿದ ಮಂಡೆ ಬಿಂಗದ ದೊರೆಯಿಂ-ತೊಂದಂದಂ ಪೊಂಡಿಸಿದಿಕ್ಕೆಲ್ಲಡಲುಭಯಂ ಪಲಗೆಯುಪ್ಪಲೋಪೆಯುಪ್ಪ ಮೂಲಿಕೆಗಳಿಂದತ್ಯಂತಲಂಕಾರವಾಗಿ ಕಚ್ಗೆ ಚೆಲ್ವಾಗೊಪ್ಪಲ್ಪಟ್ಟ ದಿವ್ಯ ಶಿವಾಲಯುವಂ ನಿರ್ಮಿಸಿದಂತಿರಬಾರದೆಂದು ಬಿಂದು ವಿಸರ್ಗಂ ದಡ್ಡತೆ ಪೊಂದಿತಾವೃತೋರ್ಧ್ವ ರೇಫೆ ದೀರ್ಘ ಹ್ರಸ್ವದಿಂದೊಪ್ಪುತ್ತಿರ್ದ ಅಕ್ಷರಮೂರ್ತಿಗಳಂ ಲೇಖನವಂ ಮಾಡೆಂದು ಚಿಕ್ಕೈಯನವರು ದಿವ್ಯ ಆಲೇಖವುಂ ಷಟ್ಸ್ಥಲಜ್ಞಾನಸಂಪನ್ನರಾದ ಅನ್ನದಾನ ದೇವರ ಹಸ್ತದಲ್ಲಿ ಪಾಲಿಸಲು ಯಿಂತೀ ಶಿವಗಣಂಗಳ ನಿರೂಪವಂ ಕೈಗೊಂಡು ಬರುವುದಕ್ಕೆ ಯನ್ನ ಕಂಗಳು ಜಿಹ್ವೆ ಕರ ಕರ್ನಂಗಳು ಗತಿ ಮತಿ ಚೈತನ್ಯಕ್ಕೆ ಸಮಸ್ತ ಸದ್ಭಕ್ತ ವೀರ ಮಾಹೇಶ್ವರರುಗಳೇ ಕರ್ತರಾದ ಕಾರಣ ಯಿಂತಿವರ ಕರುಣ ಪ್ರಸಾದವುಂ ಕೈಕೊಂಡು ಈ ವೀರಮಾಹೇಶ್ವರಾಚಾರ ಸಂಗ್ರಹವ ಬರದನಲ್ಲದೆ ನನ್ನಿಚ್ಛೆಯೊಳಂ ನಾ ಬರದುದಿಲ್ಲ ...ಈ ಪುಸ್ತಕವಂ ಬರದ ಸ್ಥಿತಿಯಂತೆಂದಡೆ ಸ್ವಸ್ತಿಶ್ರೀ ಜಯಾಭ್ಯುದಯ ವಿಧಿಷ್ಟ ಶಕ ವಿಕ್ರಮ ಶಕಯೊ ದ್ವಿತೀಯ ಶಕ ಸಂದದು ೪೦೦೦ ವರುಷ ಶಾಲಿವಾಹನ ಶಕ ಸಂದದು ೧೫೮೩ ವರುಷ ಸಂದು ವರ್ತಮಾನದ ಶಾರ್ವರಿ ಸಂವತ್ಸರದ ಚೈತ್ರ ಮಾಸದ ಶುಕ್ಲ ಪಕ್ಷದ ರೇವತಿ ನಕ್ಷತ್ರದ ಶುದ್ಧ ದಶಮಿ ಶಶಿವಾರದಲು ಬರದ ವಿರಕ್ತ ಅನ್ನದಾನ ದೇವರು ಆಚಾರ್ಯ ಚಿಕ್ಕೈಯ ದೇವಗೆ ನೀಲಕಂಠ ನಾಗನಾಥಾಚಾರ್ಯರು ವಿರಚಿಸಿದಂಥಾ ವೀರಮಾಹೇಶ್ವರಾಚಾರ ಸಂಗ್ರಹವೆಂಬ ಬಾಹುಲ್ಯವಾದ ವ್ಯಾಖ್ಯಾನ ಶಾಸ್ತ್ರವ ಬರದು ಸಂಪೂರ್ನವಾಯಿತ್ತು ಯಿಂತೀ ಪುಸ್ತಕಕ್ಕೈಶ್ವರ್ಯಮಸ್ತು ಶುಭಮಸ್ತು ನಿರ್ವಿಘ್ನಮಸ್ತು ಅಜೀರ್ಣಯಸ್ತು ಆಯುರಾರೋಗ್ಯಮಸ್ತು ಚಂದ್ರಾರ್ಕತಾರಾ ನಭವುಳ್ಳನಕಂ ಸ್ಥಾಯಿಯಸ್ತು

ಭಗ್ನಪೃಷ್ಠ ಕಟಿಗ್ರೀವ ಬದ್ಧದೃಷ್ಟಿರಧೋಮುಖಂ
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯಃ ॥

ಇಂತೆಂದುದಾಗಿ ಈ ಪುಸ್ತಕವಂ ಬರವರ್ಗಂ ಓದುವರ್ಗಂ ಶಿವಾನು ಭವವಂ ನಿರೂಪಿಸು ವರ್ಗಂ ಸಹಸ್ರಕೋಟಿ ನಮಸ್ಕಾರವಂ ಮಾಡುತ್ತಿದೇನೆ ಎನ್ನ ಬಿಂನಪವನವಧರಿಸಿಯಿದಂ ಬರದ ನಿಂಮ್ಮ ಕರುಣದ ಕಂದನಿಗೆ ನಿಮ್ಮ ಕೃಪಾಮೃತರಸವನೆಜಿದು ನೋಡಿ ಸಲಹಿ ನಿಮ್ಮ ಶ್ರೀಪಾದಪದ್ಮಾರಾಧನೆಯ ಯೆಂದೆಂದು ಪಿಂಗದಂತೆ ಮಾಡಯ್ಯಾ ಲಿಂಗ ತಂದೆ ಶರಣು ಶರಣಾರ್ಥಿ.''

ಎಂದೆಲ್ಲಾ ಹೇಳುವ ಮಾತುಗಳನ್ನು ನೋಡಿದಾಗ ಪ್ರತಿಕಾರರ ಹೆಗ್ಗಳಿಕೆ, ಬರವಣಿಗೆಯ ಶಕ್ತಿ ಆಸಕ್ತಿ ಶ್ರಮ ಎಲ್ಲವೂ ಮನದಟ್ಟಾಗುತ್ತವೆ ; ಅವರ ಬಗೆಗೆ ಅಪಾರ ಗೌರವ ಮೂಡಿಬರುತ್ತದೆ,

ಕೆಲವು ಪ್ರತಿಕಾರರು ಪದ್ಯ ರಚನೆಯ ಮೂಲಕವೂ ವಿಷಯವನ್ನು ಹೇಳಿರುವುದುಂಟು. ಉದಾಹರಣೆಗಾಗಿ ನೇಮಿಚಂದ್ರನ 'ನೇಮಿನಾಥ ಪುರಾಣ'ದ ಒಂದು ಓಲೆ ಪ್ರತಿಯಲ್ಲಿ ಬರುವ ಈ ಪದ್ಯಗಳನ್ನು ಗಮನಿಸಬಹುದು.

ಬರೆ ಶಾಲೀವಾಹನಂ ಬೇಗದೆ ಶಕ ವರುಷಂ ಸಾರೆ ಸಂವತ್ಸರಂ ಸಾ
ಸಿರದಾನೂರ್ಜಾಜು ಸಂದೊಪ್ಪುವ ಕಲಿಯುಗ ೯ಕ್ಕಾತ್ತಕ್ಷಿಯಾ ಮಾಘಮಾಸಾ
ಪರಪಕ್ಷಂ ಸಚ್ಚತುರ್ದಶ್ಯ ಹಿಮಕಿರಣವಾರಂ ಬರಲ್ ಪದ್ಮರಾಜಂ
ಬರೆದತ್ಯಂತಕ್ಕಜಂದತ್ಯಧಿಕ ಬಕುತಿಯಿಂ ನೇಮಿಸತ್ಕಾವ್ಯ ತಾಂ ॥ ೧ ॥
ಅರಿಕುಠಾರದ ಸೂರಿಪಂಡಿತರಾತ್ಮಜಂ ಚಿಕತಮ್ಮನಾ
ವರ ಸುಪುತ್ರನು ಪದ್ಮರಾಜನು ನೇಮಿನಾಥಪುರಾಣಮಂ
ಬರೆದನಿಂತಿದನೋದೆ ಕೇಳ್ದೊಡೆ ಮೋಕ್ಷಮಾರ್ಗದ ಸಂಪದಂ
ಭರದೆ ಸೇರ್ವುದು ಮಾನಸರ್ಗದಜಿತ್ತಣಿಂದವೆ ರಕ್ಷಿಪಂ ॥ ೨ ॥
ಬರೆದಂ ನೇಮಿಪುರಾಣಮಂ ವಿಬುಧರತ್ಯಾನಂಡದಿಂದೋದೆ ಕೇ
ಳ್ದರೆ ಪುಣ್ಯಂ ಮುದದಿಂದೆ ಸೇರುವುದು ಮತ್ತಲ್ಲಿರ್ದ ದೋಷಂಗಳಂ
ಭರದಿಂ ತಿರ್ದುದನೀಗಳರ್ಕ ಶಶಿತಾರಾಮೊತ್ತಮುಳ್ಳನ್ನ ಸು
ಸ್ಥಿರದಿಂದೊಪ್ಪಲಿ ಧಾತ್ರಿಯಲ್ಲಿ ನಿಜದಿಂ ಭದ್ರಂ ಶುಭಂ ಮಂಗಳಂ ॥ ೩ ॥

ಎಂಬಿತ್ಯಾದಿ ರಚನೆಯಲ್ಲಿ ಪ್ರತಿಕಾರರ ಪ್ರೌಢಿಮೆ ಅರಿವಾಗುತ್ತದೆ. ಹಾಗೆಯೇ ಕವಿಯ ಕಾಲ ತಿಳಿಯದಿದ್ದರೆ ಕಾಲಸೂಚಿತ ಪ್ರತಿಯ ಕಾಲದಿಂದ ಕವಿಯು ಇದಕ್ಕಿಂತ ಹಿಂದಕ್ಕಿದ್ದನೆಂಬುದು ಖಚಿತವಾಗುತ್ತದೆ. ಕವಿಯ ಕಾಲ ತಿಳಿದಿದ್ದರೆ ಕವಿಗೆ ಎಷ್ಟು ಹತ್ತಿರದ ಕಾಲದ ಪ್ರತಿಯಿದು ಎಂದು ತಿಳಿಯಬಹುದು.



ಯಾವುದೇ ಗ್ರಂಥದ ಪ್ರತಿ ಕವಿಗೆ ಹತ್ತಿರದ್ದಾಗಿದ್ದರೆ ಅಷ್ಟರಮಟ್ಟಿಗೆ ವಿಶ್ವಾಸಾರ್ಹ ವೆಂಬುದನ್ನು ಮನಗಾಣಬೇಕು. ಕವಿಗಿಂತ ದೂರದೂರ ಹೋದಂತೆ ಪ್ರತಿ ಸಿರು ಪ್ರತಿಗಳಾಗಿ ಹಲವಾರು ಲೋಪದೋಷಗಳುಂಟಾಗುತ್ತವೆ.

ಓಲೆ ಕಾಗದ ಮೊದಲಾದುವುಗಳನ್ನು ಪ್ರತಿ ಮಾಡುವಾಗ ಇಬ್ಬರ ಪಾತ್ರ ದ್ದರೆ ಶಾಸನದ ವಿಷಯದಲ್ಲಿ ಮೂವರ ಪಾತ್ರವಿರುತ್ತದೆಂಬುದನ್ನು ಡಿ. ಎಲ್. ನರಸಿಂಹಾಚಾರ್ ಅವರು ಪ್ರತಿಪಾದಿಸಿದ್ದಾರೆ. ಸಾಹಿತ್ಯ ರಚಿಸುವವನೊಬ್ಬನಾದರೆ ಓಲೆಯ ಮೇಲೋ ಪಟ್ಟದ ಮೇಲೋ ಬರೆಯುವವನೊಬ್ಬ ಮತ್ತು ಅದನ್ನು ಕಂಡರಿಸುವ ಅಥವಾ ಕೆತ್ತುವವನೊಬ್ಬನಾಗುತ್ತಾನೆ. ಧಾರವಾಡ ಜಿಲ್ಲೆಯ ೯೨೯ರ ಶಾಸನ ಸಾಹಿತ್ಯವನ್ನು ಶ್ರೀ ವಿಜಯನು ರಚಿಸಿದರೆ, ನಾಗಭಟ್ಟನು ಕಲ್ಲಿನ ಮೇಲೆ ಬರೆದನಂತೆ, ಆ ಮೇಲೆ ಯಾವನೋ ಒಬ್ಬ ಕಲ್ಕುಟಿಗ ಅದನ್ನು ಕಂಡರಿಸಿರಬೇಕು. ಶಕ ೧೧೧೩ರ ಚನ್ನರಾಯಪಟ್ಟಣದ ೧೭೯ನೆಯ ತಾಮ್ರ ಶಾಸನದ ಅಂತ್ಯದಲ್ಲಿ 'ಜಂನಯ್ಯನ ಕವಿತೆ ದಾವಣ್ಣನ ಬರಹ ಮಲ್ಲೊಜನ ಕಂಡರಣೆ' ಎಂದಿದೆ.

ಹಸ್ತಪ್ರತಿಗಳನ್ನು ಕೆಲವು ಗುಂಪುಗಳನ್ನಾಗಿ ವಿಂಗಡಿಸುವುದು ರೂಢಿಗೆ ಬಂದಿದೆ. ಅದರಂತೆ ಪ್ರತಿಕಾರರಾರು ಎಂಬ ಅಂಶದ ಮೇಲೆ ಇದರ ನಿರ್ಣಯ ವಾಗುತ್ತದೆ. ಡಿ. ಎಲ್. ನರಸಿಂಹಾಚಾರ್ ಅವರು ೧. ಕವಿಯ ಸ್ವಹಸ್ತಾಕ್ಷರ ಪ್ರತಿ ೨. ಏಕೈಕ ಹಸ್ತಪ್ರತಿ ೩. ಮಾತೃಕೆ ೪. ಪರಂಪರಾಗತ ಹಸ್ತಪ್ರತಿಗಳು ೫. ಮಿಶ್ರಪ್ರತಿಗಳು ಎಂಬ ಐದು ವಿಭಾಗಗಳನ್ನು ಮಾಡಿದ್ದಾರೆ.1 ಎಂ. ಎಂ. ಕಲಬುರ್ಗಿ ಅವರು ೧. ಮೂಲಪ್ರತಿ ೨. ಪರಂಪರಾಗತ ಪ್ರತಿ : ಶುದ್ಧ ಸಂತಾನ ಪ್ರತಿ ಅಶುದ್ಧ ಸಂತಾನ ಪ್ರತಿ ೩. ಏಕೈಕ ಹಸ್ತಪ್ರತಿ ೪. ಸಂರಕ್ಷಿತ ಹಸ್ತಪ್ರತಿ ಎಂದು ವಿಭಾಗಿಸಿದ್ದಾರೆ. ಹಾಗೆಯೇ ಸೀತಾರಾಮ ಜಾಗೀರ್‌ದಾರರು ೧. ಸ್ವಹಸ್ತಾಕ್ಷರ ಪ್ರತಿ ೨. ಏಕೈಕ ಹಸ್ತಪ್ರತಿ ೩. ಪರಂಪರಾಗತ ಹಸ್ತಪ್ರತಿ ೪. ಸಂರಕ್ಷಿತಹಸ್ತಪ್ರತಿ ೫. ಮಿಶ್ರ ಹಸ್ತಪ್ರತಿ ಎಂದು ವಿಂಗಡಿಸಿದ್ದಾರೆ.3

---

1. ಕ.ಗ್ರಂ.ಸಂ. ೫೮-೬೮
2. ಕನ್ನಡ ಗ್ರಂಥ ಸಂಪಾದನ ಶಾಸ್ತ್ರ ; ಪು. ೧೨೩-೧೨೯
3. ಗ್ರಂಥ ಸಂಪಾದನಾ ಶಾಸ್ತ್ರ ಪರಿಚಯ ; ಪು. : ೪೯-೫೪

ಇವುಗಳಲ್ಲಿ ಡಿ.ಎಲ್.ಎನ್. ಮತ್ತು ಜಾಗೀರ್‌ದಾರರು ಐದು ವಿಭಾಗ ಗಳನ್ನಾಗಿ ಮಾಡಿಕೊಂಡಿದ್ದರೆ, ಕಲಬುರ್ಗಿಯವರು ನಾಲ್ಕು ಭಾಗಗಳನ್ನಾಗಿ ಮಾಡಿ ಒಂದರಲ್ಲಿ ಎರಡು ಉಪವಿಭಾಗಗಳನ್ನು ಗುರುತಿಸಿದ್ದಾರೆ. ಕವಿಯ ಸ್ವಹಸ್ತಾಕ್ಷರ ಪ್ರತಿ ಅಥವಾ ಮೂಲಪ್ರತಿ, ಏಕೈಕ ಹಸ್ತಪ್ರತಿ ಪರಂಪರಾಗತ ಹಸ್ತಪ್ರತಿ ಎಂಬ ಮೂರು ವಿಧಗಳು ಮೂವರಲ್ಲಿಯೂ ಕಂಡು ಬರುತ್ತವೆ. ಉಳಿದಂತೆ ಡಿ. ಎಲ್. ಎನ್. ಅವರ ಮಾತೃಕೆ ಎಂಬುದೂ, ಕಲಬುರ್ಗಿ ಅವರ ಪರಂಪರಾಗತ ಹಸ್ತಪ್ರತಿಯಲ್ಲಿನ ಶುದ್ಧ ಸಂತಾನ, ಅಶುದ್ಧ ಸಂತಾನ ಎಂಬಿವು ಬೇರೆಯಾಗಿಯೂ, ಸಂರಕ್ಷಿತ ಎಂಬುದು ಕಲಬುರ್ಗಿ ಮತ್ತು ಜಾಗೀರ್‌ದಾರ ರಿಬ್ಬರಲ್ಲಿಯೂ ಮಿಶ್ರಹಸ್ತಪ್ರತಿ ಎಂಬುದು ಡಿ. ಎಲ್. ಎನ್. ಮತ್ತು ಜಾಗೀರ್‌ದಾರರಿಬ್ಬರಲ್ಲಿಯೂ ಕಂಡುಬರುತ್ತವೆ. ಸುರಕ್ಷಿತ ಪ್ರತಿಯನ್ನು ಡಿ. ಎಲ್. ಎನ್. ಅವರು ಮಿಶ್ರಪ್ರತಿ ವಿಭಾಗದಲ್ಲಿಯೇ ಗುರುತಿಸಿದ್ದಾರೆ. ಇವುಗಳನ್ನು ಕೆಳಕಂಡಂತೆ ಪಟ್ಟಿಮಾಡಿ ತೋರಿಸಬಹುದು.

| | | | | | |
|---|---|---|---|---|---|
| ಡಿಎಲ್‌ಎನ್ | ಸ್ವಹಸ್ತಾಕ್ಷರ | ಏಕೈಕ | ಮಾತೃಕೆ | ಪರಂಪರಾಗತ | ಮಿಶ್ರ — (ಸುರಕ್ಷಿತ) |
| ಕಲಬುರ್ಗಿ | ಮೂಲಪ್ರತಿ | ” | — | ಅ) ಶುದ್ಧ ಸಂತಾನ<br>ಆ) ಅಶುದ್ಧ ಸಂತಾನ | — ಸಂರಕ್ಷಿತ |
| ಜಾಗೀರ್‌ದಾರ | ಸ್ವಹಸ್ತಾಕ್ಷರ | ” | — | ಪರಂಪರಾಗತ | ಮಿಶ್ರ ” |

**೧. ಸ್ವಹಸ್ತಾಕ್ಷರ ಪ್ರತಿ ಅಥವಾ ಮೂಲಪ್ರತಿ** (Autograph)

೧೯ನೆಯ ಶತಮಾನದ ಕೊನೆಯಲ್ಲಿದ್ದ ಬಸವಪ್ಪ ಶಾಸ್ತ್ರಿ, ನಂದಳಿಕೆ ಲಕ್ಷ್ಮೀನಾರಣಪ್ಪ (ಮುದ್ದಣ) ಇವರ ಮತ್ತು ಅವರಿಗಿಂತ ಈಚಿನವರ ಸ್ವಹಸ್ತಾ ಪ್ರತಿಗಳು ದೊರೆಯುತ್ತವೆಯೇ ಹೊರತು, ಇದಕ್ಕೆ ಹಿಂದಿನವಾವುವೂ ಇದುವರೆಗೆ ದೊರೆತಿಲ್ಲ. ಇಂತಹವುಗಳು ದೊರೆತಾಗ ಮಾತ್ರ ಪ್ರತಿಗಳು ಸುಸ್ಥಿತಿಯಲ್ಲಿದ್ದರೆ ಯಾವ ಎಡರು ತೊಡರುಗಳೂ ಇಲ್ಲದೆ ಸಂಪಾದಿಸಿ ಪ್ರಕಟಿಸಬಹುದು ; ಬೇರೆ ಹಸ್ತಪ್ರತಿಗಳ ಅವಶ್ಯಕತೆಯೇ ಉಂಟಾಗುವುದಿಲ್ಲ. ತಾಮ್ರ ಮತ್ತು ಶಿಲೆಯ

ಮೇಲಿರುವ ಸಾಹಿತ್ಯವನ್ನೂ ಸ್ವಹಸ್ತಾಕ್ಷರ ಪ್ರತಿಗಳೆಂದು ಕರೆಯಬಹುದೆಂದು
ಹೇಳುತ್ತಾರೆ. ಏಕೆಂದರೆ ಕವಿ ರಚಿಸಿಕೊಟ್ಟ ಸಾಹಿತ್ಯವನ್ನು ತಾಮ್ರ ಅಥವಾ
ಲೆಯ ಮೇಲೆ ಕಂಡರಿಸಿದ ಮೇಲೆ ರಚಕನು ಮತ್ತೊಮ್ಮೆ ಅದನ್ನು
ನೋಡುತ್ತಿದ್ದನೆಂಬ ಊಹೆಯೇ ಕಾರಣವಾಗಿದೆ. ಆದರೆ ಇದರಲ್ಲಿಯೂ
ಸಮಯಾಭಾವದಿಂದ ಕವಿ ನೋಡದಿರಲೂ ಬಹುದೆಂಬ ಶಂಕೆ ಇದಕ್ಕೆ
ಡೊಡಕಾಗಿದೆ. ಆದರೂ ಇವು ಪ್ರತಿ ಮರು ಪ್ರತಿಗಳಾಗುವುದು ತುಂಬಾ ವಿರಳ
ವಾದುದರಿಂದ ಇವುಗಳನ್ನು ಈ ಗುಂಪಿನಲ್ಲಿ ಪರಿಭಾವಿಸಬಹುದೆಂದು ಹೇಳ
ಬಹುದು." ಬೊಪ್ಪಣ ಪಂಡಿತನ (ಕ್ರಿ.ಶ.ಸು. ೧೧೮೦) ಕೃತಿ "ಗೊಮ್ಮಟ ಜಿನ
ಸ್ತುತಿ"ಯನ್ನು ಕವಿಯ ಸ್ವಹಸ್ತಪ್ರತಿ ಅಥವಾ ಮೂಲಪ್ರತಿ ಎಂದು ಹೇಳಬಹುದು.

## ೨. ಏಕೈಕ ಹಸ್ತಪ್ರತಿ (Codex unicus)

ನಾಗವರ್ಮನ 'ಕರ್ಣಾಟಕ ಕಾದಂಬರಿ', ಚೌಂಡರಸನ 'ನಳಚಂಪು',
ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ', ಬಂಧುವರ್ಮನ
'ಹರಿವಂಶಾಭ್ಯುದಯ' ಮೊದಲಾದ ಗ್ರಂಥಗಳ ಒಂದೊಂದೇ ಹಸ್ತಪ್ರತಿಗಳು
ದೊರೆತು ಸಂಪಾದನಾಕಾರ್ಯ ಬಹು ತೊಡಕಾಗಿ ಪರಿಣಮಿಸಿರುವುದು ಕಂಡು
ಬರುತ್ತದೆ. ಈ ಹಸ್ತಪ್ರತಿಗಳು ಅಶುದ್ಧವಾಗಿದ್ದರೆ, ತ್ರುಟಿತವಾಗಿದ್ದರೆ
ಅವುಗಳನ್ನು ತಿದ್ದುವುದು ಅಥವಾ ತುಂಬುವುದು ತುಂಬಾ
ಶ್ರಾಸದಾಯಕ. 'ಕರ್ಣಾಟಕ ಕಾದಂಬರಿ' ಗ್ರಂಥದಲ್ಲಿ ತ್ರುಟಿತ ಭಾಗಗಳನ್ನು
ತುಂಬಿ ಸರಿಪಡಿಸಲು ಸಂಪಾದಕರಾದ ಬಿ. ಮಲ್ಲಪ್ಪನವರು ಪಟ್ಟ ಶ್ರಮ
ಶ್ಲಾಘನೀಯವಾದುದು. ಇದನ್ನು ಸಂಪಾದಿಸುವಾಗ್ಗೆ ಮೂಲಗ್ರಂಥವಾದ
ಬಾಣನ 'ಕಾದಂಬರಿಯನ್ನೂ, ಸಂಸ್ಕೃತ ಪಂಡಿತರ ಸಹಾಯವನ್ನೂ ಪಡೆದು
ಕಾರ್ಯನಿರ್ವಹಣೆ ಮಾಡಿದ್ದಾರೆ. ಏಕೆಂದರೆ ಇಂತಹ ಏಕೈಕ ಹಸ್ತಪ್ರತಿಗಳಲ್ಲಿ
ದೊರೆತ ಗ್ರಂಥಗಳು ಆದಷ್ಟು ಬೇಗ ಅಚ್ಚಾದರೆ ದೊರೆತ ಗ್ರಂಥ ಶಾಶ್ವತವಾಗಿ
ಉಳಿದಂತಾಗುವುದಲ್ಲದೆ ಮತ್ತೂ ತ್ರುಟಿತವಾಗಿ ಹಾಳಾಗುವುದನ್ನು
ತಪ್ಪಿಸಬಹುದು. ಎಷ್ಟೇ ಕಷ್ಟಗಳು ಎದುರಾದರೂ ಕ್ವಚಿತ್ತಾಗಿ ಎಡವಿದರೂ
ಇಂತಹ ಕೆಲಸವನ್ನು ಯಾರಾದರೂ ಮಾಡಿಯೇ ತೀರಬೇಕು. ಇದೇ ಉದ್ದೇಶ

ದಿಂದ ನಾನು 'ಹರಿವಂಶಾಭ್ಯುದಯ', 'ವರ್ಧಮಾನ ಪುರಾಣ' ಮೊದಲಾದ
ಗ್ರಂಥಗಳ ಕಾರ್ಯವನ್ನು ನಿರ್ವಹಿಸಿದ್ದೇನೆ.

### ೩. ಮಾತೃಕೆ (Exemplar)

ಇದನ್ನು ಡಿ.ಎಲ್.ಎನ್. ಅವರು ಮಾತ್ರ ಗುರುತಿಸಿದ್ದಾರೆ. ಯಾವುದೇ ಗ್ರಂಥದ ಒಂದಕ್ಕಿಂತ ಹೆಚ್ಚು ಹಸ್ತಪ್ರತಿಗಳು ದೊರೆತಾಗ, ದೊರೆತ ಎಲ್ಲವೂ ಬೇರೆ ಬೇರೆ ಮಾತೃಕೆಗಳ ನಕಲಾಗಿರಬಹುದು. ಇವೆಲ್ಲಕ್ಕೂ ಮೂಲವಾಗಿರ ಬಹುದಾದ ಹಸ್ತಪ್ರತಿಯನ್ನು ಮಾತೃಕೆ ಎಂದು ಹೇಳಬಹುದು. 'ಕಖಗ' ಸಂಕೇತಗಳ ಮೂರು ಪ್ರತಿಗಳಿಗೆ 'ಯ' ಎಂಬ ಅಲಭ್ಯ ಪ್ರತಿ ಮಾತೃಕೆ ಯಾಗುತ್ತದೆ. 'ಖಗ'ಗಳಿಗೆ 'ಕ' ಪ್ರತಿ ಮೂಲವಾಗಿದ್ದಲ್ಲಿ 'ಕ' ಎಂಬುದನ್ನು ಲಬ್ಧ ಮಾತೃಕೆಯೆಂದೂ, 'ಯ' ಎಂಬುದನ್ನು ಅಲಭ್ಯ ಮಾತೃಕೆಯೆಂದೂ ಹೇಳಲಾಗಿದೆ.1

### ೪. ಪರಂಪರಾಗತ ಹಸ್ತಪ್ರತಿಗಳು (Transmitted Texts)

ಯಾವುದೇ ಗ್ರಂಥದ ಹಸ್ತಪ್ರತಿಯಾಗಲಿ ಸ್ವಹಸ್ತಪ್ರತಿಯಾಗದಿದ್ದಲ್ಲಿ ಪರಂಪರಾಗತ ಪ್ರತಿಯಾಗುತ್ತದೆ. ಇಂತಹವು ಎಷ್ಟೇ ಪ್ರತಿಗಳು ದೊರೆತರೂ ಅವುಗಳೆಲ್ಲವೂ ಮೂಲದಿಂದ ಬಂದಿರುತ್ತವೆ. ಇವುಗಳಲ್ಲಿ ಪ್ರತಿ ಮಾಡಿದ ಕಾಲ, ಲಿಪಿಯ ವೈಶಿಷ್ಟ್ಯ, ಅಕ್ಷರಸ್ಖಾಲಿತ್ಯ ಮೊದಲಾದುವುಗಳ ಆಧಾರದ ಮೇಲೆ ವಿಂಗಡಿಸಿ ಯಾವ ಯಾವ ಪೀಳಿಗೆಗೆ ಸೇರಿದುದೆಂಬುದನ್ನು ಗುರುತು ಮಾಡ ಬೇಕಾಗುತ್ತದೆ. ಡಿ.ಎಲ್.ಎನ್. ಅವರು ಒಬ್ಬನೇ ಕವಿ ಮತ್ತೊಮ್ಮೆ ಮಗದೊಮ್ಮೆ ತಿದ್ದಿ ಪಾಠಗಳನ್ನು ಬದಲಾಯಿಸಿದಾಗ (ಉದಾ : ಡಿ.ವಿ.ಜಿ. ಅವರ ಬೇಲೂರಿನ ಶಿಲಾಬಾಲಿಕೆಯರು) ಅವುಗಳ ಬೇರೆ ಬೇರೆ ಪ್ರತಿಗಳನ್ನು ಇದೇ ಗುಂಪಿಗೆ ಸೇರಿಸಿದ್ದಾರೆ. ಕಲಬುರ್ಗಿ ಅವರು ಈ ಪ್ರತಿಗಳಲ್ಲಿ ಶುದ್ಧ ಸಂತಾನ, ಅಶುದ್ಧ ಸಂತಾನ ಎಂಬೆರಡು ಪ್ರಭೇದಗಳನ್ನು ಮಾಡಿದ್ದಾರೆ. ಒಂದು ಪೀಳಿಗೆಯು ಪರಂಪರಾಗತ ಪ್ರತಿ ಮೂಲಕ್ಕೆ ಪ್ರಾಮಾಣಿಕವಾಗಿದ್ದರೆ ಶುದ್ಧ ಸಂತಾನ

1. ಕ.ಗ್ರಂ.ಸಂ. ; ಪು. ೬೦

ಂದೂ,ಪೀಳಿಗೆ ಪರಂಪರೆ ಮೂಲಕ್ಕೆ ಪ್ರಾಮಾಣಿಕವಾಗಿರದಿದ್ದಲ್ಲಿ ಅಥವಾ ಒಂದು ತಿಯ ಪ್ರತಿ ಮಾಡಲು ಹಲವು ಲಿಪಿಕಾರರು ಕೂಡಿ ಬರೆಯುವುದು ಇಲ್ಲವೆ ಂದಕ್ಕಿಂತ ಹೆಚ್ಚು ಪ್ರತಿಗಳನ್ನುಪಯೋಗಿಸಿ ಒಂದು ಪ್ರತಿ ಮಾಡುವುದು ವುಗಳು ಅಶುದ್ಧ ಸಂತಾನ ಪ್ರತಿಗಳೆಂದು ಹೇಳಿದ್ದಾರೆ.

ಅಲ್ಲದೆ ಶುದ್ಧ ಸಂತಾನ, ಅಶುದ್ಧ ಸಂತಾನ ಎರಡರಲ್ಲಿಯೂ ಮಾತೃಕಾ ್ರತಿ, ಪುತ್ರಿಕಾ ಪ್ರತಿ, ಸೋದರ ಪ್ರತಿ, ಸದಸ್ಕ ಪ್ರತಿ ಎಂಬ ಒಳಭೇದಗಳನ್ನು ಡುತ್ತಾರೆ.2

. **ಮಿಶ್ರ ಪ್ರತಿಗಳು** (Misch-codices ; Conflated Texts)

ಈ ಐದನೆಯ ವಿಭಾಗದ ಹಸ್ತಪ್ರತಿಗಳನ್ನು ಡಿ ಎಲ್ ಎನ್ ಮತ್ತು ಾಗೀರ್‌ದಾರರು ಗುರುತಿಸಿದ್ದರೆ ಕಲಬುರ್ಗಿಯವರು ಬಿಟ್ಟಿದ್ದಾರೆ. ಎಂದರೆ ಬುರ್ಗಿಯವರು ಅಶುದ್ಧ ಸಂತಾನ ಎಂದು ಹೇಳಿರುವುದೇ ಮಿಃಶ್ರಪ್ರತಿಯಾಗಿ ಡುಬರುತ್ತದೆ. ಬೇರೆ ಬೇರೆ ಪೀಳಿಗೆಯ ಎರಡು ಅಥವಾ ಹೆಚ್ಚು ಪ್ರತಿಗಳನ್ನು ಪಯೋಗಿಸಿ ಒಂದು ಪ್ರತಿಯನ್ನು ತಯಾರುಮಾಡುವುದು ಅಥವಾ ಒಂದು ್ರತಿಗೆ ಮತ್ತೊಂದು ಪ್ರತಿಯಿಂದ ದೊರೆತ ಬೇರೆ ಪಾಠಗಳನ್ನು ಗುರುತಿಸಿ ವುದು ಮಿಶ್ರಪ್ರತಿಯೆನ್ನಿಸಿಕೊಳ್ಳುತ್ತದೆ. ಇಲ್ಲವೆ ಕೃತಿ ಸಾಕಷ್ಟು ವಿಸ್ತಾರ ಾಗಿದ್ದು ಒಬ್ಬನಿಂದಲೇ ಬರೆಯಲು ಸಾಧ್ಯವಿಲ್ಲದಾದಾಗ ಬೇರೆ ಬೇರೆ ಭಾಗ ಳನ್ನು ಬೇರೆ ಬೇರೆ ಪ್ರತಿಕಾರರು ಲಿಖಿಸಿರುವುದೂ ಇದಕ್ಕೇ ಸೇರುತ್ತದೆ. "ಇಂಥ ್ರತಿಗಳನ್ನು ಬಹುಲಿಪಿಕಾರ ಪ್ರತಿಗಳೆಂದು ಕರೆದಿದೆ" ಎಂದು ಡಿ.ಎಲ್.ಎನ್. ೂಚಿಸುತ್ತಾರೆ.

ಈ ಮಿಶ್ರಪ್ರತಿಗೆ ಉದಾಹರಣೆಯಾಗಿ "ಯೆರಡು ಮೂಲಪ್ರತಿಗಳನ್ನು ಟ್ಟುಕೊಂಡು ಸಮಗ್ರವಾಗಿ ಬರೆಯಲ್ಪಟ್ಟಿದೆ. ಕವಿಕುಂಜರ ಲೀಲಾವತಿ ಪೂರ್ಣಂ" ಮತ್ತು "ಕಟ್ಟಿಗೆ ಲಕ್ಷುಮಯ್ಯನವರ ಮನೆ ಪ್ರತಿ ಹೋಗಿ ಬಂದು ಂದುದ್ದಕ್ಕೆ ೩ ಪರ್ವಮಂನು ಚವಡಪ್ಪ ಬರದು ಶೇರಿಸಿಯಿರುವದಕ್ಕೆ ನಿರ್ವಿಘ್ನ

ಕನ್ನಡ ಗ್ರಂಥಸಂಪಾದನ ಶಾಸ್ತ್ರ ; ಪು. ೧೨೫-೧೨೬

ಮಸ್ತು"[3] ಎಂಬಿವುಗಳನ್ನು ಜಾಗೀರ್‌ದಾರರು ನೀಡಿದ್ದಾರೆ. ಇದೇ ಲೀಲಾವತಿ ಗ್ರಂಥದ ಹಸ್ತಪ್ರತಿಯನ್ನು ಅಶುದ್ಧ ಸಂತಾನ ಪ್ರತಿಗೆ ಉದಾಹರಣೆಯಾಗಿ ಕಲಬುರ್ಗಿಯವರು ನೀಡಿದ್ದಾರೆ.

## ೬. ಸಂರಕ್ಷಿತ ಹಸ್ತಪ್ರತಿ (Protected Text)

ಡಿ.ಎಲ್.ಎನ್. ಅವರು ಇದನ್ನು ಬೇರೆ ಒಂದು ವಿಭಾಗದಲ್ಲಿ ವಿವರಿಸಿಲ್ಲವಾದರೂ ಮಿಶ್ರಪ್ರತಿ ವಿಭಾಗದಲ್ಲಿಯೇ ಇದನ್ನು ಸೂಚಿಸಿ, ಇದಕ್ಕೆ ಉದಾಹರಣೆಯಾಗಿ "ವರ್ಜಿಲ್‌ಕವಿಯ 'ಏನಾಡ್' ಎಂಬ ಮಹಾಕಾವ್ಯದ ಮತ್ತು ಅವನವೇ ಆದ ಇತರ ಕಾವ್ಯಗಳ ಹಸ್ತಪ್ರತಿಗಳು ಈ ತೆರನಾದವು 'ಧವಲಾ' 'ಜಯಧವಲಾ', 'ಮಹಾಧವಲಾ 'ಎಂಬ ಈ ಮಹಾಗ್ರಂಥಗಳ ಅತಿಪ್ರಾಚೀನವೂ ಅಧಿಕೃತವೂ ಆದ ಹಸ್ತಪ್ರತಿ ಮೂಡಬಿದರೆಯ ಜೈನಭಂಡಾರದಲ್ಲಿದೆ. ಇದರ ಪ್ರತಿಗಳನ್ನು ಮಾಡಲು ಹಲವು ಶತಮಾನಗಳಿಂದ ಯಾರಿಗೂ ಅವಕಾಶವನ್ನು ಕೊಡಲಿಲ್ಲ. ಇದು ಮಠಾಧಿಪತಿಗಳಿಂದ ಒಂದು ರೀತಿಯಲ್ಲಿ ಸುರಕ್ಷಿತವಾಗಿರುವ ಪ್ರತಿ"[1] ಎಂದು ಹೇಳಿದ್ದಾರೆ. ಕಲಬುರ್ಗಿಯವರು ಸಂರಕ್ಷಿತ ಹಸ್ತಪ್ರತಿಗೆ ಇದೇ ಗ್ರಂಥಗಳ ವಿವರಣೆಯನ್ನು ನೀಡಿರುವುದಲ್ಲದೆ "ಕಲಬುರ್ಗಿ ಜಿಲ್ಲೆಯ ಕೊಡೆಕಲ್ಲ ಗ್ರಾಮದ ಬಸವೇಶ್ವರ ದೇವಾಲಯದಲ್ಲಿ ವರ್ಷಕ್ಕೊಮ್ಮೆ ಹೊರತೆಗೆದು ಓದಲ್ಪಡುವ, ದೇವರಂತೆ ಗದ್ದುಗೆಯಲ್ಲಿ ಪೂಜೆಗೊಳ್ಳುತ್ತಿರುವ ಶರಣರ ವಚನಗ್ರಂಥಗಳಿವೆ. ಇವೂ ಸಂರಕ್ಷಿತ ಹಸ್ತಪ್ರತಿಗಳು"[2] ಎಂದು ಹೇಳಿದ್ದಾರೆ. ಜಾಗೀರ್‌ದಾರರು ಡಿ.ಎಲ್.ಎನ್. ಅವರು ಹೇಳಿರುವ ಎರಡು ಗ್ರಂಥಗಳ ಜತೆಗೆ ಏಕನಾಥನೆಂಬುವನು 'ಜ್ಞಾನೇಶ್ವರಿ' ಗ್ರಂಥದ ಪಾಠ ಕೆಡಬಾರದೆಂದು ಪ್ರಯತ್ನಿಸಿ ೧೫೮೪ರಲ್ಲಿ ಹಲವು ಪ್ರತಿಗಳನ್ನುಪಯೋಗಿಸಿ ಒಂದು ಶುದ್ಧಪ್ರತಿ ತಯಾರಿಸಿ ಏಕನಾಥ ಮಠದಲ್ಲಿ ಕಾಪಾಡಿರುವ ಪ್ರತಿಯನ್ನು ಸಂರಕ್ಷಿತ ಹಸ್ತಪ್ರತಿಯೆಂದು ಹೇಳಿದ್ದಾರೆ.[3]

---

3. ಗ್ರಂಥ ಸಂಪಾದನಾ ಶಾಸ್ತ್ರ ; ಪು. ೫೪-೫೫
1. ಕ.ಗ್ರಂ.ಸಂ. ; ಪು. ೬೬
2. ಕನ್ನಡ ಗ್ರಂಥ ಸಂಪಾದನ ಶಾಸ್ತ್ರ ; ಪು. ೧೩೦
3. ಗ್ರಂಥ ಸಂಪಾದನಾಶಾಸ್ತ್ರ ; ಪು. ೫೪-೫೫

ಹೀಗೆ ಹಸ್ತಪ್ರತಿಗಳನ್ನು ಬೇರೆ ಬೇರೆ ಹೆಸರುಗಳಿಂದ ವಿವಿಧ ಗುಂಪು
ನ್ನಾಗಿ ಮಾಡಿದರೂ ಕೆಲವು ಹಸ್ತಪ್ರತಿಗಳು ಒಂದಕ್ಕಿಂತ ಹೆಚ್ಚು ಗುಂಪುಗಳಲ್ಲಿ
ನೆಗೆ ಬರುತ್ತವೆ. ಕವಿಯ ಸ್ವಹಸ್ತಪ್ರತಿ ಏಕೈಕ ಹಸ್ತಪ್ರತಿಯಾಗಿಯೂ,
ರಕ್ಷಿತ ಪ್ರತಿಯಾಗಿಯೂ ಆಗಬಹುದು. ಮಾತೃಕಾ ಪ್ರತಿ ಎಂಬುದು ನಮಗೆ
ರೆಯದಿರುವ ಮೂಲವನ್ನೊ, ಕವಿಯ ಸ್ವಹಸ್ತಾಕ್ಷರ ಪ್ರತಿಯನ್ನೊ ಅಥವಾ
ರೆತವುಗಳಲ್ಲಿಯೇ ಮೂಲವೆಂದು ಕಂಡುಬಂದುದನ್ನೊ ಹೇಳುವಂತಹ
ತಾಗಿರುವುದರಿಂದ ಇದನ್ನು ಇಲ್ಲಿ ಬಿಡಬಹುದಾಗಿದೆ. ಕಲಬುರ್ಗಿ ಅವರು
ಹಸ್ತಾಕ್ಷರ ಪ್ರತಿಯನ್ನೇ ಮೂಲ ಪ್ರತಿ ಎಂದು ಕರೆದಿದ್ದರೆ ಎಂದರೆ ಇದೂ
ಡ ಮಾತೃಕಾಪ್ರತಿಯೇ ಆಗುತ್ತದೆ. ಶುದ್ಧ ಸಂತಾನ, ಅಶುದ್ಧ ಸಂತಾನ
ಬ ಪದಗಳೇ ಶುದ್ಧವಾಗಿ ಕಾಣುವುದಿಲ್ಲ. ಅವುಗಳಲ್ಲಿ ಮಾತೃಕಾ, ಸೋದರಾ,
ತ್ರಿಕಾ– ಮೊದಲಾದುವುಗಳನ್ನು ಗುರುತಿಸುವುದು ಅಗತ್ಯವಾಗಿ ಕಾಣುವುದಿಲ್ಲ.
ಟ್ಟಿನಲ್ಲಿ ಹೇಳುವುದಾದರೆ ಕವಿಯ ಸ್ವಹಸ್ತಾಕ್ಷರ ಪ್ರತಿ, ಏಕೈಕ ಹಸ್ತಪ್ರತಿ,
ರಂಪರಾಗತ ಪ್ರತಿ, ಮಿಶ್ರ ಪ್ರತಿ ಮತ್ತು ಸಂರಕ್ಷಿತ ಪ್ರತಿ ಎಂಬ ಐದು
ಾಗಗಳನ್ನು ಮಾಡಿಕೊಳ್ಳುವುದು ಸಾಧುವಾಗಿ ಕಾಣುತ್ತದೆ.

ಕವಿಗಳು ತಮ್ಮ ಪ್ರತಿಭಾಸಾಮರ್ಥ್ಯದಿಂದ ರಚಿಸಿದ ಕಾವ್ಯಗಳನ್ನು,
ವತ್ಪೂರ್ಣ ಪಂಡಿತರಿಂದ ನಿರೂಪಗೊಂಡ ಶಾಸ್ತ್ರಗ್ರಂಥಗಳನ್ನು ಪ್ರತಿಕಾರರು
ತಿಮಾಡಿ ಆ ಗ್ರಂಥ ಸಂಪತ್ತನ್ನು ಕಾಪಾಡಿಕೊಂಡು ಬಂದಿರುವುದು ಪುಣ್ಯ
ಶೇಷವೆಂದೇ ಹೇಳಬೇಕು. ಅತ್ತಿಮಬ್ಬೆಯಂತಹ ಶಾಸ್ತ್ರದಾಸಿಗಳಿಂದ, ರಾಜರ,
ಕ್ತರ ಗ್ರಂಥಾಭಿರುಚಿಯಿಂದ ಗ್ರಂಥಗಳ ಪ್ರತಿ ಮರುಪ್ರತಿಗಳಾಗಿ
ವಾದರೂ ಉತ್ತಮ ಗ್ರಂಥಗಳು ನಮಗೆ ಲಭ್ಯವಾಗಿವೆ. ಇಂತಹ ಸಾಹಿತ್ಯ
ಪತ್ತನ್ನು ಸಂಗ್ರಹಿಸಿ, ಸಂರಕ್ಷಿಸಿ, ಸಂಪಾದಿಸಿ, ಪ್ರಕಟಿಸಿ ಜನತೆಗೆ ದೊರೆಯು
ತೆ ಮಾಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

# ಸಂಗ್ರಹ

ಹಸ್ತಪ್ರತಿಗಳು ಮಠಮಂದಿರಗಳಲ್ಲಿ, ಖಾಸಗಿ ವ್ಯಕ್ತಿಗಳಲ್ಲಿ ಸಂಗ್ರಹ ವಾಗಿರುವುದುಂಟು. ಪಂಡಿತರು ತಮ್ಮ ವ್ಯಾಸಂಗಕ್ಕಾಗಿ ತಮಗೆ ಬೇಕಾದ ಕೃತಿ ಗಳನ್ನು ದೊರೆಯುವವರಿಂದ ಪಡೆದು ಅಥವಾ ಅಲ್ಲಿಯೇ ಪ್ರತಿ ಮಾಡಿಸಿಕೊಳ್ಳು ತ್ತಿದ್ದರು. ಜ್ಯೋತಿಷ ವೈದ್ಯ ಮೊದಲಾದ ವಿಷಯಗಳ ಗ್ರಂಥಗಳು ಪ್ರತಿಗಳಾಗಿ ಇತರೆಡೆಗೆ ಹೋಗಲೇಬೇಕಾಗಿರುವುದು ಸಹಜವಾಗಿದೆ. ಅಲ್ಲದೆ ಗ್ರಂಥಪಠನ ಮಾಡುವವರಿಗೆ ಅಭ್ಯಾಸಿಗಳಿಗೆ ಹೊಸ ಹೊಸ ಗ್ರಂಥಗಳ ಆವಿಷ್ಕಾರವಾದಂತೆ ಅವುಗಳ ಪ್ರತಿಗಳನ್ನು ಮಾಡಿಸಿ ತರಿಸುವ ಹಂಬಲ ಇದ್ದೇ ಇರುತ್ತಿದ್ದಿತು. "ಅರಮನೆ, ಮಠ, ಮಂದಿರ, ಬಸದಿಗಳಲ್ಲಿ ಸಾಹಿತ್ಯಾಭಿಮಾನಿಗಳ ಅಧಿಕಾರಿಗಳ ಮತ್ತು ಶ್ರೀಮಂತರ ಮಹಾಮನೆಗಳಲ್ಲಿ ಲೇಖಕ ವಾಚಕ ವಾದಿಗಳ ಬಳಗವೇ ಇರುತ್ತಿದ್ದಿತು. ಸರಸ್ವತೀ ಭಂಡಾರಗಳು ಅರಮನೆಗಳ ಐಶ್ವರ್ಯದ ಪ್ರತಿಷ್ಠೆ ಘನತೆ, ಗಾಂಭೀರ್ಯಗಳ ಪ್ರತೀಕಗಳಾಗಿದ್ದವು."1 ಎಂದು ಹೆಚ್. ದೇವೀರಪ್ಪ ನವರು ಹೇಳಿರುವುದು ಸಮಂಜಸವಾಗಿದೆ.

ಧಾರ್ಮಿಕವಾಗಿ ಮಾಡುವ ಇತರ ದಾನಕಾರ್ಯಗಳಂತೆ ಶಾಸ್ತ್ರ ದಾನವೂ ಒಂದು ಪ್ರಧಾನ ಕಾರ್ಯವಾಗಿದ್ದಿತು. ಧಾರ್ಮಿಕ ಭಾವನೆಯುಳ್ಳ ವ್ಯಕ್ತಿಗಳಲ್ಲಿ ಈ ಕಾರ್ಯ ಅನೂಚಾನವಾಗಿ ನಡೆದುಬಂದಿರುವುದರಿಂದ ಹಸ್ತಪ್ರತಿಗಳು ನಾಡಿನ ಉದ್ದಗಲಕ್ಕೂ ತುಂಬಲು ಸಹಕಾರಿಯಾಯಿತು. ಅದರಲ್ಲಿಯೂ ರಾಮಾಯಣ, ಭಾರತಗಳಂತಹ ಪುರಾಣ ಕಾವ್ಯಗಳು ಎಲ್ಲಿಹೋದರಲ್ಲಿ ದೊರೆಯುತ್ತವೆ. ಅತ್ತಿಮಬ್ಬೆಯು ಪೊನ್ನನ 'ಶಾಂತಿನಾಥಪುರಾಣ'ದ ಒಂದು ಸಾವಿರ ಪ್ರತಿಗಳನ್ನು ಮಾಡಿಸಿ ದಾನಚಿಂತಾಮಣಿಯಾದುದು ಪ್ರಸಿದ್ಧವಾಗಿದೆ. ಹೀಗೆ ಮಾಡಿರಬಹುದಾದ ಮತ್ತೂ ಹಲವು ಜನರ ಕಾರ್ಯಗಳು ಯಾವ ಲೇಖನಿಯ ಹಿಡಿತಕ್ಕೂ ಸಿಕ್ಕದೆ ಹೋಗಿರಬಹುದು.

---

1. ಹಸ್ತಪ್ರತಿ ಶಾಸ್ತ್ರ ; ಪು. ೧೫

ದೇಶದ ಹಾಗೂ ಪ್ರಪಂಚದ ವಿವಿಧೆಡೆಗಳಲ್ಲಿ ಹರಡಿಹೋಗಿ ಅಲ್ಲಲ್ಲಿ ಂಗ್ರಹವಾಗಿರುವ ಮತ್ತೂ ಈಗಲೂ ಖಾಸಗಿ ವ್ಯಕ್ತಿಗಳಲ್ಲಿ ಸೇರಿರುವ ಹಸ್ತ ್ರತಿಗಳ ಮಾಹಿತಿ ಸಂಗ್ರಹಣೆಯಾಗಲಿ, ಹಸ್ತಪ್ರತಿಗಳ ಸಂಗ್ರಹವಾಗಲಿ ಅತ್ಯಂತ ುಸ್ತರವಾದ ಕಠಿಣ ಸಮಸ್ಯೆಗಳನ್ನೊಡ್ಡುವ ಕೆಲಸ ಎಂಬುದನ್ನು ಈ ಕ್ಷೇತ್ರದಲ್ಲಿ ಲಸ ಮಾಡಿರುವವರು ಮಾತ್ರ ಅರ್ಥಮಾಡಿಕೊಳ್ಳಬಲ್ಲರು. "ಹಸ್ತಪ್ರತಿಗಳ ಂಡಾರದ ಅಧಿಕಾರಿಗಳು ಆಗಿಂದಾಗ್ಗೆ ನಡೆಸುವುದುಂಟು. ಇಂಥ ಪವಿತ್ರ ಾರ್ಯವನ್ನು ಎಷ್ಟು ಶ್ರದ್ಧೆಯಿಂದ ಮಾಡಿದರೂ ಅದಕ್ಕೆ ಇತಿಮಿತಿಗಳಿಲ್ಲ. ೇವಲ ಹೊಟ್ಟೆಪಾಡಿಗಾಗಿ ಕೈಗೊಳ್ಳುವ ಉದ್ಯೋಗವೆಂದು ಎಣಿಸದೆ, ಅದೊಂದು ಪೂರ್ವವಾದ ಸದವಕಾಶವೆಂದು ಮಾಡಿದರೆ ಆಗ ಅದು ಸಂಗ್ರಹಕಾರನಿಗೂ ಂಸ್ಥೆಗೂ ಮಹದುಪಕಾರವಾದಂತಾಗುವುದು. ನಾನು ತಿಳಿದಂತೆಯೇ ಕೆಲವರಿಗೆ ದರಲ್ಲಿ ಸ್ವತಃ ಒಂದು ಅಪ್ರತಿಮವಾದ ಸಾಮರ್ಥ್ಯವಿರುತ್ತದೆ. ಈ ಕೆಲಸಕ್ಕೆ ಂತಹ ಆಸಕ್ತರು ಅತ್ಯಗತ್ಯ"[2] ಎಂದು ಡಾ|| ಜಿ. ವರದರಾಜರಾಯರು ೇಳಿರುವುದು ಈ ಮಹತ್ವದ ಕೆಲಸದ ಬಗೆಗೆ ಹಿಡಿದ ಕೈಗನ್ನಡಿಯಾಗಿದೆ.

ಮೇಲೆ ಅಧಿಕಾರಿಗಳು ಸಂಗ್ರಹಕಾರ್ಯ ಮಾಡುತ್ತಾರೆಂದು ಹೇಳಿದ್ದಾರೆ. ದರಲ್ಲಿ ಎಷ್ಟು ಜನ ಆಸಕ್ತರಿರುತ್ತಾರೆಂಬುದು ಮುಖ್ಯವಾಗಿದೆ. ಅಲ್ಲದೆ ಈಗ ೂರೆತಿರುವ ಗ್ರಂಥಗಳು, ಹೆಸರು ತಿಳಿದಿದ್ದರೂ ಲಭ್ಯವಿಲ್ಲದ ಗ್ರಂಥಗಳು, ಹೀಗೆ ವಿಧ ರೀತಿಯ ಕೃತಿಗಳ ಬಗೆಗೆ ಸೂಕ್ತವಾದ ಅರಿವು ಅತ್ಯಗತ್ಯ. ದೊರೆತ ್ರಂಥಗಳು ತಮ್ಮಲ್ಲಿ ಇವೆಯೆ ? ಇದ್ದರೆ ಎಷ್ಟಿವೆ ? ಎಂಬೆಲ್ಲ ಮಾಹಿತಿಗಳನ್ನು ರಿಶೀಲಿಸುವ ಸಾವಧಾನವಾದರೂ ಇರಬೇಕು. ಇಲ್ಲದಿದ್ದಲ್ಲಿ ಯಾವ ಹಸ್ತಪ್ರತಿಗೆ ಷ್ಟು ಪ್ರಾಮುಖ್ಯ ಕೊಡಬೇಕೆಂಬ ಪರಿಜ್ಞಾನವೇ ಇರುವುದಿಲ್ಲ. ಹಲವಾರು ಸ್ತಪ್ರತಿಗಳು ದೊರೆತಾಗ ಎಲ್ಲವನ್ನೂ ಒಂದು ಸಂಸ್ಥೆಗೆ ನೀಡಿದರೆ ಪರಿಶೀಲಿಸಲು ಮಯವಿರುತ್ತದೆ ; ಇಲ್ಲದಿದ್ದರೂ ಅಂತಹವುಗಳ ಸಂಗ್ರಹ ಕಷ್ಟವಾಗುತ್ತದೆ. ಸ್ತಪ್ರತಿಗಳಲ್ಲಿ ಮುಖ್ಯವಾದುವನ್ನು ಕಾಡಿಯೋ ಬೇಡಿಯೋ ತರಲು ಅಥವಾ ೖಕ್ರೊಫಿಲಂ ಮತ್ತಿತರ ಸಾಧನಗಳ ಮೂಲಕ ಪ್ರತಿ ಮಾಡಿಕೊಳ್ಳಲು

ಅದೇ. ; ಪು. ೫೮–೫೯

ದೊರೆಯುವ ಕೃತಿಗಳ ಪ್ರಾಮುಖ್ಯ ತಿಳಿದಿರಬೇಕು. ಇದಕ್ಕೆ ಸಂಗ್ರಹಕಾರರಿಗೆ ಸಾಹಿತ್ಯದ ಆಳವಾದ ಜ್ಞಾನ ಅತ್ಯಾವಶ್ಯಕ.

ಹಸ್ತಪ್ರತಿಗಳನ್ನು ನೋಡುವವರಿರಲಿ ಇಲ್ಲದಿರಲಿ, ಒಳಗಣ ವಿಷಯ ತಿಳಿಯಲಿ ತಿಳಿಯದಿರಲಿ ಒಟ್ಟಿನಲ್ಲಿ ಸಂಗ್ರಹ ಮಾಡುವ ಒಂದು ಹವ್ಯಾಸ ಕೆಲವರಲ್ಲಿ ಉಂಟಾಯಿತು. ಇಂತಹ ಕಾರ್ಯದಿಂದಲೇ ಕನ್ನಡ ಹಸ್ತಪ್ರತಿಗಳು ಭಾರತದ ಹಲವೆಡೆಗಳಲ್ಲಲ್ಲದೆ ಹೊರದೇಶದಲ್ಲಿಯೂ ತಂಗಿರುವುದುಂಟು. ಈ ಹಸ್ತಪ್ರತಿಗಳ ಸಂಗ್ರಹ ಇಂತಹ ಭಾಷೆಗೆಂದು ಮೀಸಲಾಗಿರಲಿಲ್ಲ. ಹೀಗೆ ಸಂಗ್ರಹ ಮಾಡುವಾಗ ಇಂತಹ ಭಾಷೆಗೇ ಹೆಚ್ಚು ಗಮನ ಕೊಡಬೇಕೆಂಬುದು ಇತ್ತೀಚೆಗೆ ರೂಢಿಗೆ ಬಂದಿದೆ. ಆಯಾಯಾ ಭಾಷೆಗಳಲ್ಲಿ ಪ್ರತ್ಯೇಕವಾದ ಸಂಶೋಧನೆ, ಸಂಪಾದನೆ, ಪ್ರಕಟಣೆಗಳು ಪ್ರಾರಂಭವಾದ ಮೇಲೆ ತಮಗೆ ಬೇಕಾದುವನ್ನೇ ಸಂಗ್ರಹಿಸಿ ಸಂರಕ್ಷಿಸುವ ಹೊಣೆಯನ್ನು ಆಯಾ ಇಲಾಖೆ ಹೊತ್ತಿರುವುದು ತೀರಾ ಇತ್ತೀಚಿನದು.

೧೭೮೩ರಲ್ಲಿ ಇಂಜಿನಿಯರ್ ಆಗಿ ಭಾರತಕ್ಕೆ ಬಂದು, ಅನಂತರ ಪ್ರಥಮ ಸರ್ವೆಯರ್ ಜನರಲ್ ಆಗಿ ನೇಮಕಗೊಂಡ ಕರ್ನಲ್ ಮೆಕೆಂಜಿಯೇ ಹಸ್ತಪ್ರತಿಗಳ ಸಂಗ್ರಹದ ಕೆಲಸ ಮಾಡಿದ ಮೊತ್ತಮೊದಲಿಗ ಎಂದೂ ಈತನ ಸಂಗ್ರಹದಲ್ಲಿ ಸೇರಿದ ಕನ್ನಡ ಹಸ್ತಪ್ರತಿಗಳು "೧೮೫೮ರಲ್ಲಿ ಸ್ಥಾಪಿತವಾದ ಮದರಾಸು ಸರ್ಕಾರಿ ಹಸ್ತಪ್ರತಿ ಭಂಡಾರಕ್ಕೆ ಸೇರ್ಪಡೆಯಾದ ಮೆಕೆಂಜಿ ಸಂಗ್ರಹವೇ ಪ್ರಪ್ರಥಮ ಸಾರ್ವಜನಿಕ ಕನ್ನಡ ಹಸ್ತಪ್ರತಿ ಭಂಡಾರ"[1] ಎಂದೂ ಶ್ರೀ ಎಚ್. ದೇವೀರಪ್ಪನವರು ಹೇಳಿದ್ದಾರೆ. ಮೈಸೂರಿನಲ್ಲಿ ೧೮೯೧ರಲ್ಲಿ ಸ್ಥಾಪಿತವಾದ ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯೇ ಕರ್ಣಾಟಕದಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವ ಸರ್ಕಾರದ ಮೊದಲ ಸಂಸ್ಥೆಯಾಯಿತು. ಇದನ್ನು ಬಿಟ್ಟರೆ ಸರ್ಕಾರೀ ವತಿಯಿಂದ ಸಂಗ್ರಹಿಸಿದ ಮತ್ತೊಂದು ಸಂಸ್ಥೆಯೆಂದರೆ ೧೯೩೯ರಲ್ಲಿ ಸ್ಥಾಪಿತವಾದ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆ. ಕರ್ಣಾಟಕದಲ್ಲಿ ಈಗ ಹಸ್ತಪ್ರತಿಗಳ ಸಂಗ್ರಹ ಮಾಡಿರುವ ಸಂಸ್ಥೆಗಳೆಂದರೆ ಮೈಸೂರಿನ ಪ್ರಾಚ್ಯವಿದ್ಯಾ

1. ಕನ್ನಡ ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೭೭. ಪುಟ ೯೮, ೧೦೧.

ಂಶೋಧನಾಲಯ, ಕನ್ನಡ ಅಧ್ಯಯನ ಸಂಸ್ಥೆ, ಅರಮನೆಗೆ ಸೇರಿದ ಸರಸ್ವತೀ ಂಡಾರ, ಬೆಂಗಳೂರು ಕನ್ನಡ ಅಧ್ಯಯನ ಕೇಂದ್ರ, ಕನ್ನಡ ಸಾಹಿತ್ಯ ಪರಿಷತ್ತು, ಾರವಾಡದ ಕನ್ನಡ ಅಧ್ಯಯನ ಪೀಠ ಮುಖ್ಯವಾದುವಾಗಿವೆ. ಅಲ್ಲದೆ ಮಂಡ್ಯ ್ರವಣಬೆಳಗೊಳ ಹೊಂಬುಜ ವರಾಂಗ ಮೂಡಬಿದರೆ ಕಾರ್ಕಳಗಳಲ್ಲಿನ ಜೈನ ುಠಗಳು, ಮೂಡಬಿದರೆಯ ವೀರವಾಣಿ ಸಿದ್ಧಾಂತ ಭವನ, ಶೃಂಗೇರಿ, ಉಡುಪಿ ೇಲುಕೋಟೆ, ಸಿರಿಗೆರೆ, ಚಿತ್ರದುರ್ಗ, ಬಳ್ಳಾರಿ, ಹುಬ್ಬಳ್ಳಿಯ ಮಠಗಳಲ್ಲಿ ಸ್ತಪ್ರತಿಗಳ ಸಂಗ್ರಹವಿದೆ. ಈಚೆಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ರ್ಮಸ್ಥಳದ 'ಮಂಜೂಷಾ' ಹಸ್ತಪ್ರತಿ ಭಂಡಾರಗಳು ರೂಪುಗೊಂಡಿವೆ. ಹೀಗೆ ುಠಮಂದಿರಗಳಲ್ಲಿ ದೊರೆಯುವ ಹಸ್ತಪ್ರತಿಗಳಲ್ಲದೆ ಹಲವಾರು ವಿದ್ವಾಂಸರ ುನೆಗಳಲ್ಲಿಯೂ ಹಲವು ಅಳಿದುಳಿದ ಹಸ್ತಪ್ರತಿಗಳು ದೊರೆಯುತ್ತವೆ. ಇನ್ನು ಲವು ವಿದ್ವಾಂಸರು ತಮ್ಮ ಕೈಗೆ ಸಿಕ್ಕಿದವುಗಳನ್ನು ತಮ್ಮ ಮನೆಗಳಲ್ಲಿಯೇ ಂಗ್ರಹಿಸಿಟ್ಟು ಎಲ್ಲಿಯೋ ಹಾಳಾಗುತ್ತಿದ್ದುವನ್ನು ತಾವೇ ನಾಶಮಾಡು ್ತಿರುವುದೂ ಉಂಟು.

ಕರ್ನಾಟಕದ ಹೊರಗೆ ಮದರಾಸು ಗೌರ್ನಮೆಂಟ್ ಓರಿಯಂಟಲ್ ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಆಡಿಯಾರ್ ಲೈಬ್ರರಿ, ಕೊಲ್ಲಾಪುರದ ಶ್ರೀ ಲಕ್ಷ್ಮೀ ೇನ ಜೈನಮಠ, ಬಾಹುಬಲಿ ಆಶ್ರಮ, ಪೂನಾದ ಭಂಡಾರ್ಕರ್ ಓರಿಯಂಟಲ್ ಸರ್ಚ್ ಇನ್‌ಸ್ಟಿಟ್ಯೂಟ್, ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾನಿಲಯದ ್ರಂಥ ಭಂಡಾರ, ಬಿಹಾರದ ಅರಾದಲ್ಲಿನ ಜೈನ ಸಿದ್ಧಾಂತ ಭವನ, ತಂಜಾವೂರು ರಸ್ವತೀ ಮಹಲ್ ಲೈಬ್ರರಿ ಮತ್ತು ಇತರೆಡೆ ಕನ್ನಡ ಹಸ್ತಪ್ರತಿಗಳು ಸಂಗ್ರಹ ಾಗಿರುವುದು ಕಂಡುಬರುತ್ತದೆ. ಈ ಎಲ್ಲ ಹಸ್ತಪ್ರತಿ ಭಂಡಾರಗಳನ್ನೂ ಂಗೃಹೀತ ಕೃತಿಗಳನ್ನು ನಾನೇ ನೋಡಿದ್ದೇನೆ. ಕೆಲವೆಡೆ ಪೂರ್ಣವಾಗಿ ಇಲ್ಲವೇ ಭಾಗಶಃ ಕನ್ನಡ ಹಸ್ತಪ್ರತಿಗಳ ಮೈಕ್ರೊಫಿಲಂ ಕಾರ್ಯ ಮಾಡ ಲಾಗಿದೆ. ಅವುಗಳು ಈಗ ಕನ್ನಡ ಅಧ್ಯಯನ ಸಂಸ್ಥೆಯಲ್ಲಿವೆ.1 ನಾನು ೋಡಲಾಗದಿರುವ ಇನ್ನೂ ಅನೇಕ ಕಡೆಗಳಲ್ಲಿ ಕನ್ನಡ ಹಸ್ತಪ್ರತಿಗಳು

. ವಿವರಗಳಿಗೆ: **ಕನ್ನಡ ಹಸ್ತಪ್ರತಿಗಳ ಮೈಕ್ರೊಫಿಲಂ ಸೂಚಿ: ಸಂ. ಬಿ. ಎಸ್. ಸಣ್ಣಯ್ಯ.**

ದೊರೆಯುತ್ತವೆಂದು ತಿಳಿದುಬರುತ್ತದೆ. ಅವೆಂದರೆ ಮಹಾರಾಷ್ಟ್ರದ ಕರಂಜಾ ಮುಂಬಯಿಯ ಐಲಕಲಾಲ್ ಪನ್ನಾಲಾಲ್ ದಿಗಂಬರ ಜೈನ ಸರಸ್ವತಿ ಭಂಡಾರ, ಆಂಧ್ರಪ್ರದೇಶದ ಮೆಹಬೂಬ್ ನಗರದ ಒಬ್ಬ ಖಾಸಗೀ ವ್ಯಕ್ತಿಯ ಮನೆಯಲ್ಲಿ ಹಸ್ತಪ್ರತಿ ಸಂಗ್ರಹವಿದೆಯೆಂದು ತಿಳಿದುಬರುತ್ತದೆ. ಖಾಸಗಿ ವ್ಯಕ್ತಿಗಳೆಂದಾಗ ನೆನಪಿಗೆ ಬರುವ ಅಂಶವೆಂದರೆ ಕರ್ನಾಟಕದ ಮೂಲೆಮೂಲೆ ಗಳಲ್ಲಿ, ಮನೆಮನೆಗಳಲ್ಲಿ ಹೆಚ್ಚೋ ಕಡಮೆಯೋ ಹಸ್ತಪ್ರತಿಗಳು ದೊರೆಯುತ್ತ ವೆಂಬುದನ್ನು ನೆನಪಿನಲ್ಲಿಡಬೇಕು. ಭಾರತದ ಹೊರಗಡೆ ಎಂದರೆ ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಕೆಲವು ಕನ್ನಡ ಹಸ್ತಪ್ರತಿಗಳು ದೊರೆಯುತ್ತವೆ.2

ನಾನು ಈ ಮೊದಲೇ ತಿಳಿಸಿರುವಂತೆ ಇದರ ಸಂಗ್ರಹಕಾರ್ಯ ತುಂಬಾ ಕಷ್ಟಸಾಧ್ಯವೂ, ಶ್ರಮಪೂರಿತವೂ ಆದುದಾಗಿದೆ. ಸಂಗ್ರಹ ಕಾರ್ಯಕ್ಕೆ ಹೊರಟಾಗ ಅನೇಕ ಎಡರುತೊಡರುಗಳಾಗಿರುವುದುಂಟು. ದಿ|| ರಾ. ನರಸಿಂಹಾ ಚಾರ್ಯರು ಮತ್ತು ಅವರ ಸಹೋದ್ಯೋಗಿಗಳು ಶಾಸನ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವಾಗ್ಗೆ ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಗಂಟುಮೂಟೆ ಗಳನ್ನು ಕಟ್ಟಿಕೊಂಡು, ಲಾಟೀನುಗಳನ್ನು ಹಿಡಿದುಕೊಂಡು ಹಳ್ಳಿಹಳ್ಳಿಗಳನ್ನು ಸುತ್ತಿ ಹಸ್ತಪ್ರತಿಗಳ ಸಂಗ್ರಹ ಮಾಡಿರುವುದುಂಟು. ದಿ. ಫ. ಗು. ಹಳಕಟ್ಟಿ ಯವರು ಯಾರ ನೆರವೂ ಇಲ್ಲದೆ ಶ್ರದ್ಧಾಪೂರ್ವಕವಾಗಿ ವಚನಸಾಹಿತ್ಯದ ಹಸ್ತಪ್ರತಿಗಳ ಸಂಗ್ರಹಕ್ಕಾಗಿ ಹಗಲಿರುಳೂ ದುಡಿದಿರುವುದುಂಟು. ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ, ಸಂಪಾದನೆ ಮತ್ತು ಪ್ರಕಟಣೆಗಾಗಿಯೇ ೧೮೯೧ರಲ್ಲಿ ಸರ್ಕಾರೀ ಪ್ರಾಚ್ಯ ಗ್ರಂಥಭಂಡಾರ ಮೈಸೂರಿನಲ್ಲಿ ಸ್ಥಾಪಿತವಾದಮೇಲೆ ಎ. ಮಹದೇವ ಶಾಸ್ತ್ರೀ, ಆರ್. ಶಾಮಶಾಸ್ತ್ರೀ ಮೊದಲಾದ ಹಿರಿಯರು ಸಂಗ್ರಹ ಕಾರ್ಯವನ್ನು ತೀವ್ರಗೊಳಿಸಿ ಹಲವಾರು ಉತ್ತಮ ಗ್ರಂಥಗಳನ್ನು ಸಂಸ್ಥೆಗೆ ಸೇರಿಸಿದ್ದಾರೆ. ಎಚ್. ದೇವೀರಪ್ಪನವರು ಇದಕ್ಕಾಗಿ ಅಪಾರ ಕಾಣಿಕೆ ಸಲ್ಲಿಸಿದ್ದಾರೆ. ಇತ್ತೀಚೆಗೆ ಎಸ್. ಶಿವಣ್ಣ ಅವರು ಬೆಂಗಳೂರು ವಿಶ್ವವಿದ್ಯಾ

---

2. ಎನ್. ಅನಂತರಂಗಾಚಾರ್ ಅವರು ೨೮ ಹಸ್ತಪ್ರತಿ ಭಂಡಾರಗಳ ಪಟ್ಟಿ ಮಾಡಿದ್ದಾರೆ. (ಪ್ರ.ಕ. ೩೧-೨)

ಲಯದ ಕನ್ನಡ ಅಧ್ಯಯನ ಕೇಂದ್ರಕ್ಕಾಗಿ ಶ್ರದ್ಧೆಯಿಂದ ದುಡಿದು ಹಲವಾರು ುತ್ತಮ ಹಸ್ತಪ್ರತಿಗಳ ಸಂಗ್ರಹ ಮಾಡಿದ್ದಾರೆ. ಹಾಗೆಯೆ ಬೆಂಗಳೂರಿನ .ಎಂ.ಶ್ರೀ. ಪ್ರತಿಷ್ಠಾನ ಮತ್ತು ಧರ್ಮಸ್ಥಳದ ಮಂಜೂಷಾ ಹಸ್ತಪ್ರತಿ ಭಂಡಾರ ಳು ಹಸ್ತಪ್ರತಿಗಳ ಸಂಗ್ರಹದಲ್ಲಿ ಸ್ತುತ್ಯ ಕಾರ್ಯ ಮಾಡುತ್ತಿವೆ. ಇವು ಇನ್ನೂ ೀವ್ರ ಕಾರ್ಯಕ್ರಮಗಳನ್ನು ಕೈಗೊಂಡು ಮತ್ತೂ ಹೆಚ್ಚಿನ ಸಂಗ್ರಹ ಮಾಡಬೇಕಿದೆ. ೀಗೆ ಹತ್ತಾರು ಜನ ವಿದ್ವಾಂಸರು ಹಿರಿಯರು ಆಸಕ್ತಿವಹಿಸಿ ಈ ಕೆಲಸ ಾಡಿರುವುದರಿಂದಲೇ ಇಂದು ಪ್ರಾಚೀನ ಸಾಹಿತ್ಯದ ಪ್ರಕಟಣೆಗೆ ಹಸ್ತಪ್ರತಿಗಳು ೊರೆಯುತ್ತಿವೆ.

ಹಸ್ತಪ್ರತಿಗಳ ಸಂಗ್ರಹಕ್ಕಾಗಿ ಕೆಲಸಮಾಡಿದ ಅನೇಕರಿಗೆ ವಿವಿಧ ರೀತಿಯ ನುಭವಗಳಾಗಿರಬಹುದು. ನನ್ನ ಅನುಭವಗಳಲ್ಲಿ ಕೆಲವನ್ನಾದರೂ ಇಲ್ಲಿ ರೂಪಿಸಿದರೆ ಸಂಗ್ರಹಕಾರ್ಯದ ಬಗೆಗೆ ತಿಳುವಳಿಕೆ ಮೂಡಿದಂತಾಗುತ್ತದೆಂದು ಾವಿಸಿದ್ದೇನೆ.

ಮಠಗಳು ಮತ್ತು ಖಾಸಗಿ ವ್ಯಕ್ತಿಗಳು ಕೆಲವರು ಪರಿಶೀಲಿಸಲೂ ಅವಕಾಶ ರಾಕರಿಸಿರುವುದುಂಟು. ಆಂಧ್ರ ಪ್ರದೇಶದಲ್ಲಿರುವ ಒಂದು ಮಠದಲ್ಲಿ ಕೆಲವು ನ್ನಡ ಹಸ್ತಪ್ರತಿಗಳಿವೆಯೆಂದು ತಿಳಿದು ಬಂದ ಮೇರೆಗೆ ವಿಶ್ವವಿದ್ಯಾನಿಲಯ ಂದ ಬರುತ್ತಿದ್ದೇವೆಂದು ಕಾಗದ ಬರೆದು ಹೋದರೂ ಅಲ್ಲಿಯ ವ್ಯವಸ್ಥಾಪಕರು ೋಡಲೂ ಕೂಡ ಅವಕಾಶ ಕೊಡಲು ನಿರಾಕರಿಸಿದರು. ಮತ್ತೊಮ್ಮೆ ಅಲ್ಲಿಗೆ ೋಗಿ ನೋಡುವ ಅವಕಾಶವೇ ಒದಗಿ ಬರಲಿಲ್ಲ. ಹಾಗೆಯೇ ಕೊಳ್ಳೇಗಾಲ ುತ್ತಿತರ ಕೆಲವು ಖಾಸಗಿ ವ್ಯಕ್ತಿಗಳಲ್ಲಿಯೂ ಇಂತಹುದೇ ಅನುಭವವಾಯಿತು. ಾಮರಾಜನಗರ ತಾಲ್ಲೂಕಿನ ಹರವೆ ಎಂಬ ಗ್ರಾಮದ ಪಂಡಿತರೊಬ್ಬರ ುನೆಯಲ್ಲಿ ಸಂಗ್ರಹವಾಗಿದ್ದ ಅಮೂಲ್ಯ ಹಸ್ತಪ್ರತಿಗಳು ನಾವು ಪರಿಶೀಲಿಸಲು ೋಗುವ ವೇಳೆಗೆ ಜಾಯಿಕಾಯಿ ಪೆಟ್ಟಿಗೆಯಲ್ಲಿದ್ದು ನೀರು ತುಂಬಿಕೊಂಡು ೊಳೆತು ನಾರುತ್ತಿದ್ದುವು. ಬಾಯಿ ಮೂಗಿಗೆ ಬಟ್ಟೆ ಕಟ್ಟಿಕೊಂಡು ಸಾಧ್ಯ ಾದಷ್ಟು ಮಟ್ಟಿಗೆ ತೆಗೆದು ಪರಿಶೀಲಿಸಿ ಕೆಲವನ್ನಾದರೂ ಖರೀದಿಸಿ ಂಶೋಧನಾಲಯಕ್ಕೆ ಸೇರಿಸಲು ಸಾಧ್ಯವಾಯಿತು. ಮತ್ತೆ ಕೆಲವೆಡೆ ತ್ಮೀಯವಾಗಿ ಬರಮಾಡಿಕೊಂಡು ಹಸ್ತಪ್ರತಿಗಳ ಪರಿಶೀಲನೆಗೆ, ಪ್ರತಿಮಾಡಿ ೊಳ್ಳುವುದಕ್ಕೆ ತುಂಬು ಸಹಕಾರ ನೀಡಿದ ಮಹನೀಯರೂ ಇದ್ದಾರೆ. ಇದೇ

ಚಾಮರಾಜನಗರ ತಾಲ್ಲೂಕಿನ ಬೇಡಮೂಡಲು ಎಂಬ ಚಿಕ್ಕ ಹಳ್ಳಿಯಲ್ಲಿ ಶ್ರೀ ಪಂಡಿತ ಸಂಪತ್ಕುಮಾರಾಚಾರ್ಯ ಎಂಬುವವರ ಮನೆಯಲ್ಲಿ ಸಂಗ್ರಹವಾಗಿದ್ದ ಸಂಸ್ಕೃತ ಕನ್ನಡ ಹಸ್ತಪ್ರತಿಗಳು ಅತ್ಯಂತ ಸುಸ್ಥಿತಿಯಲ್ಲಿದ್ದುವು. ಅವರು ನಮ್ಮನ್ನು ಊಟೋಪಚಾರಗಳಿಂದ ಸತ್ಕರಿಸಿ ಗೋಣಿಚೀಲಗಳಲ್ಲಿ ತುಂಬಿ ಮೋಟಾರು ರಸ್ತೆಯವರೆಗೆ ತಮ್ಮ ಗಾಡಿಯಲ್ಲಿ ಹೇರಿಕಳುಹಿಸಿದ ಸುಸಂಸ್ಕೃತ ಹಿರಿತನ ನನ್ನ ಕಣ್ಮುಂದೆ ಇಂದೂ ಅಚ್ಚಳಿಯದಿದೆ. ಹಾಗೆಯೇ ಶ್ರವಣಬೆಳಗೊಳದ ಶ್ರೀ ರಾಜೇಂದ್ರಕುಮಾರ್ ಎಂಬುವವರ ಮನೆಯಲ್ಲಿ ಸಂಗ್ರಹವಾಗಿದ್ದ ಹಸ್ತಪ್ರತಿಗಳನ್ನು ಅವರ ಸಹ ಧರ್ಮಿಣಿಯವರು ತಮ್ಮ ಪತಿ ಊರಿನಲ್ಲಿಲ್ಲದಿದ್ದರೂ, ಪರಿಶೀಲಿಸಿ ಮೈಕ್ರೊಫಿಲಂ ಮಾಡಿಕೊಳ್ಳಲು ಅವಕಾಶ ನೀಡಿದುದನ್ನು ಎಂದೂ ಮರೆಯುವಂತಿಲ್ಲ. ಸಹಕಾರ ನೀಡುವ ಮಠಗಳಲ್ಲಿ ಬಹು ಮುಂಚೂಣಿಯ ಪಾತ್ರಗಳೆಂದರೆ ಜೈನ ಮಠಗಳು. ಇಲ್ಲಿಯ ಆತ್ಮೀಯತೆ ಸಹಕಾರಗಳನ್ನು ತುಂಬು ಹೃದಯದಿಂದ ನೆನೆಸಿಕೊಳ್ಳಬೇಕಾಗಿದೆ. ಅವರು ನಮ್ಮನ್ನು ಸಾಂಸ್ಕೃತಿಕ ಸಂಪತ್ತಿನ ರಕ್ಷಣೆಗಾಗಿ ಟೊಂಕಕಟ್ಟಿ ನಿಂತಿರುವ ಹಿರಿಯ ವ್ಯಕ್ತಿಗಳೆಂದೇ ಪರಿಗಣಿಸುತ್ತಾರೆ. ಶ್ರವಣಬೆಳಗೊಳ ಹೊಂಬುಜ ಮೊದಲಾದೆಡೆಗಳಲ್ಲಿ ಹಸ್ತಪ್ರತಿಗಳ ಪರಿಶೀಲನೆಗೆ ಹೋದವರಿಗೆಲ್ಲಾ ಈ ಅನುಭವವಾಗಿರಬಹುದು.

ಹಸ್ತಪ್ರತಿಗಳು ಇಂತಿಲ್ಲಿ ದೊರೆಯುತ್ತವೆ ಎಂಬ ಬಗೆಗೆ ಮಾಹಿತಿಯನ್ನು ಒದಗಿಸಿಕೊಳ್ಳುವುದು ಹೇಗೆಂದು ಕೆಲವರು ನನ್ನನ್ನು ಪ್ರಶ್ನಿಸಿರುವುದುಂಟು. ಇದಕ್ಕಾಗಿ ಹಲವು ವಿಧದಿಂದ ಪ್ರಯತ್ನಿಸಬಹುದು. ಸಂಸ್ಥೆಗೆ ಬರುವ ಕೆಲವರಾದರೂ ಈ ಬಗೆಗೆ ಆಸಕ್ತಿಯುಳ್ಳವರಾಗಿರುತ್ತಾರೆ. ಅವರಿಗೆ ತಮ್ಮಲ್ಲಿ ಸಂಗ್ರಹವಾಗಿರುವ ಹಸ್ತಪ್ರತಿಗಳನ್ನು ತೋರಿಸಿ, ಕೆಲಸ ಮಾಡುವ ರೀತಿಯನ್ನು ವಿವರಿಸಿ ಅದರ ಪ್ರಾಮುಖ್ಯವನ್ನು ಅರಿವು ಮಾಡಿಕೊಟ್ಟಾಗ ತಮಗೆ ತಿಳಿದಂತಹ ಕೆಲವು ಸಂಸ್ಥೆಗಳನ್ನೊ ವ್ಯಕ್ತಿಗಳನ್ನೊ ತೋರಿಸುವುದುಂಟು ; ಇಲ್ಲವೆ ಆ ಬಗೆಗೆ ತಿಳಿದು ಮಾಹಿತಿ ಒದಗಿಸಿಕೊಡಬಹುದು. ಹಸ್ತಪ್ರತಿಗಳ ಪ್ರದರ್ಶನವನ್ನೇರ್ಪಡಿಸಿ ಕರಪತ್ರಗಳನ್ನು ಮುದ್ರಿಸಿ ಹಂಚಿ ಉಪಯೋಗ ಪಡೆಯಬಹುದು. ಸಂಘ ಸಂಸ್ಥೆಗಳನ್ನು ಸಂಪರ್ಕಿಸಿ ವಿವರಗಳನ್ನು ತಿಳಿದು ಮುಂದುವರಿಯಬಹುದು. ಖಾಸಗಿ ವ್ಯಕ್ತಿಗಳಲ್ಲಿರುವುದನ್ನು ಪತ್ತೆ ಹಚ್ಚುವುದು ಸ್ವಲ್ಪ ಕಷ್ಟದ ಕೆಲಸವೇ ಆಗಿದೆ. ಅದಕ್ಕಾಗಿ ಹಳ್ಳಿಯಿಂದ ಹಳ್ಳಿಗೆ ಹೋಗಿ ಮಾಹಿತಿ ಸಂಗ್ರಹಿಸಿ, ಅವಕಾಶ



ದೊರೆತಲ್ಲಿ ಪರಿಶೀಲಿಸುವುದುಂಟು. ಇಂತಹ ಕಡೆಗಳಲ್ಲಿ ಅಲ್ಲಿರುವರಿಗೆ ತಿಳಿದಿರುವ ಬೇರೆಡೆಯಲ್ಲಿ ದೊರೆಯುವ ಹಸ್ತಪ್ರತಿಗಳ ವಿಷಯ ತಿಳಿಸುತ್ತಾರೆ. ಹೀಗೆ ಇಲ್ಲಿಂದಲ್ಲಿಗೆ, ಅಲ್ಲಿಂದ ಮತ್ತೊಂದೆಡೆಗೆ ಹೋಗಲು ಅವಕಾಶ ದೊರೆಯುತ್ತದೆ. ಹಿಂದೆ ಪ್ರಾಚ್ಯ ವಿದ್ಯಾ ಸಂಶೋಧನಾಲಯದಿಂದ ಹಸ್ತ ಪ್ರತಿಗಳ ಪ್ರಾಮುಖ್ಯ ಪವಿತ್ರತೆ, ಉಚಿತವಾಗಿ ಕೊಟ್ಟರೆ ಅವರ ಹೆಸರನ್ನು ಸಂಸ್ಥೆಯಲ್ಲಿ ಹಾಕುವುದು, ಮಾರಾಟದಿಂದ ಬರುವ ಹಣ ಇತ್ಯಾದಿ ಮಾಹಿತಿಗಳನ್ನೊಳಗೊಂಡ 'ಪ್ರಸಿದ್ಧ ಪತ್ರಿಕೆ'ಯನ್ನು ವಿವಿಧ ಸಂಸ್ಥೆಗಳಿಗೆ ವ್ಯಕ್ತಿಗಳಿಗೆ ಸರಕಾರಿ ಕಚೇರಿಗಳಿಗೆ ರವಾನಿಸಿ ಮಾಹಿತಿಯನ್ನು ಪಡೆದಿರುವುದುಂಟು. ನಾನು ಕೆಲವು ತಾಲ್ಲೂಕುಗಳ ತಹಸೀಲ್ದಾರರುಗಳಿಗೆ ಪ್ರಸಿದ್ಧ ಪತ್ರಿಕೆಗಳನ್ನು ಕಳುಹಿಸಿ ಹಸ್ತಪ್ರತಿಗಳ ಬಗೆಗೆ ಮಾಹಿತಿಯನ್ನು ಒದಗಿಸಿಕೊಡಬೇಕೆಂದು ಕೇಳಿಕೊಂಡೆನು. ಕೆಲವರು ಉತ್ತರವನ್ನೇ ನೀಡದಿದ್ದರೂ, ಮತ್ತೆ ಕೆಲವರು ಸುಲಭವಾದ ನಕಾರಾತ್ಮಕ ಮರು ಓಲೆ ಕಳುಹಿಸಿದರು. ಹೊನ್ನಾವರ ಮತ್ತು ಚಾಮರಾಜನಗರ ತಾಲ್ಲೂಕುಗಳ ತಹಸೀಲ್ದಾರರು ಅತ್ಯಂತ ಶ್ರದ್ಧೆಯಿಂದ ತಮ್ಮ ರೆವಿನ್ಯೂ ಇನ್‌ಸ್ಪೆಕ್ಟರುಗಳ ಮೂಲಕ ಆದಷ್ಟು ಮಾಹಿತಿ ಸಂಗ್ರಹಿಸಿ ವಿಷಯ ತಿಳಿಸಿದರು. ನಾನು ಸಹೋದ್ಯೋಗಿಗಳೊಡನೆ ಹೋದಾಗ್ಗೆ ನಮ್ಮ ಜೊತೆಯಲ್ಲಿ ತಮ್ಮ ಸಹಾಯಕರನ್ನು ಕಳುಹಿಸಿ ಹಸ್ತಪ್ರತಿಗಳ ಪರಿಶೀಲನೆಗೆ ಹಾಗೂ ಸಂಗ್ರಹಕ್ಕೆ ಅನುವು ಮಾಡಿಕೊಟ್ಟುದನ್ನು ಇಲ್ಲಿ ನೆನೆಯಲೇಬೇಕಾಗಿದೆ. ಹೊನ್ನಾವರದ ತಹಸೀಲ್ದಾರರ ಸಹಾಯವಿಲ್ಲದಿದ್ದರೆ ಮಾವಿನಕುರ್ವೆಯಂತಹ ದ್ವೀಪಕ್ಕೆ ಹೋಗಿ ಕೆಲವು ಹಸ್ತಪ್ರತಿಗಳನ್ನಾದರೂ ಸಂಗ್ರಹಿಸಲು ಸಾಧ್ಯವಾಗುತ್ತಿರಲಿಲ್ಲ ; ಚಾಮರಾಜನಗರದ ತಹಸೀಲ್ದಾರರ ಸಹಾಯವಿಲ್ಲದಿದ್ದರೆ ಚಾಮರಾಜನಗರ ಮಲೆಯೂರು ಹರವೆ ಮತ್ತು ಇತರ ಹಳ್ಳಿಗಳಲ್ಲಿ ದೊರೆತ ಹಸ್ತಪ್ರತಿಗಳನ್ನು ಪರಿಶೀಲನೆ ಮಾಡಿ ಸಾಕಷ್ಟು ಹಸ್ತಪ್ರತಿ ಸಂಗ್ರಹ ಮಾಡಲು ಅವಕಾಶ ಒದಗಿಬರುತ್ತಿರಲಿಲ್ಲವೇನೊ. ಹೀಗೆ ಒಂದಲ್ಲ ಒಂದು ರೀತಿಯಲ್ಲಿ ಪ್ರಯತ್ನಮಾಡಿ ಹಸ್ತಪ್ರತಿಗಳ ಸಂಗ್ರಹಕ್ಕೆ ಪ್ರಯತ್ನಿಸುವುದು ಸೂಕ್ತವಾಗಿದೆ.

ಹಸ್ತಪ್ರತಿಗಳ ಸಂಗ್ರಹಕ್ಕೆ ಹೋದವರು ಮೊದಲು ಅವುಗಳ ಪರಿಶೀಲನೆ ಮಾಡಬೇಕಾಗುತ್ತದೆ. ಈಗಾಗಲೆ ದೊರೆತಿರುವ ಕೃತಿಗಳ ಮಾಹಿತಿಯನ್ನು ಹಸ್ತಪ್ರತಿ ಸೂಚಿಗಳ ಮೂಲಕ ಪರಿಶೀಲಿಸುವುದಲ್ಲದೆ ತಾವೂ ಮಹತ್ವದ ಕೃತಿ

ಗಳಾವುವೆಂಬುದನ್ನು ತಿಳಿದಿರಬೇಕಾಗುತ್ತದೆ. ಇದಕ್ಕೆ ಪೂರಕವಾಗಿ ಅತ್ಯಗತ್ಯವಾಗಿ ಬೇಕಾದ ಶ್ರದ್ಧೆ ನಿಷ್ಠೆ ತಾಳ್ಮೆಯುಳ್ಳವರಾಗಬೇಕಾಗುತ್ತದೆ. ಹಸ್ತಪ್ರತಿಗಳ ಮೇಲೆ ಯಾರೋ ಹಚ್ಚಿದ ತಲೆಬರಹವನ್ನು ನೋಡಿ ಇದು ಈ ಕೃತಿ ಎಂದು ತೀರ್ಮಾನಿಸಿ ಮುಂದುವರಿಯುವುದು ಖಂಡಿತ ಕೂಡದು. ಇದಕ್ಕೆ ನನ್ನ ಅನುಭವದ ಕೆಲವು ಮಾತುಗಳನ್ನು ಓದುಗರ ಅವಗಾಹನೆಗೆ ತರುತ್ತಿದ್ದೇನೆ.

ಡಿ. ಎಲ್. ನರಸಿಂಹಚಾರ್ ಅವರು ಕಂಡುಹಿಡಿದ 'ವಡ್ಡಾರಾಧನೆ' ಕೃತಿಯ ಅನಂತರ ದೊರೆತ ಮಹತ್ವದ ಶೋಧನೆಯ ಕೃತಿಯೆಂದರೆ ೨ನೇ ನಾಗವರ್ಮನ 'ವರ್ಧಮಾನಪುರಾಣ' ಇದನ್ನು ಕಂಡು ಹಿಡಿದದ್ದು ಬಹುರೋಚಕ ಸನ್ನಿವೇಶದಲ್ಲಿ. ಮೊದಲೇ ಬಹಳ ಜನ ಮೂಡಬಿದರೆಯ ಜೈನಧರ್ಮಶಾಲೆಯಲ್ಲಿದ್ದ ಹಸ್ತಪ್ರತಿಗಳನ್ನು ಪರಿಶೀಲಿಸಿದ್ದರು. ಆದರೆ ನಾನು ಹೋದಾಗ್ಗೆ 'ವರ್ಧಮಾನ ಪುರಾಣ' ದೊರೆತದ್ದು ಹಸ್ತಪ್ರತಿಗಳ ಕೂಲಂಕಷ ಪರಿಶೀಲನೆಯಿಂದ. ೧೯೭೦ರಲ್ಲಿ ಅಲ್ಲಿ ದೊರೆಯುವ ಮುಖ್ಯ ಹಸ್ತಪ್ರತಿಗಳ ಮೈಕ್ರೊಫಿಲಂಗಾಗಿ ಛಾಯಚಿತ್ರಗ್ರಾಹಕರ ಜೊತೆಯಲ್ಲಿ ಹೋಗಿದ್ದೆನು. ಇದಕ್ಕಾಗಿ ಹಸ್ತಪ್ರತಿಗಳ ಪರಿಶೀಲನೆಮಾಡಿ ಮುಖ್ಯವಾದುವನ್ನು ಆರಿಸಬೇಕಾದುದು ನನ್ನ ಕರ್ತವ್ಯವಾಗಿದ್ದಿತು. ಒಂದು ತಿಂಗಳ ವಾಸ್ತವ್ಯದಲ್ಲಿ ಹಸ್ತಪ್ರತಿಗಳೆಲ್ಲವನ್ನೂ ಪರಿಶೀಲಿಸುವ, ಮುಖ್ಯವಾದುವನ್ನು ಮೈಕ್ರೊಫಿಲಂ ಮಾಡಿಸುವ ಕೆಲಸದಲ್ಲಿ ನಿರತನಾಗಿದ್ದ ನನಗೆ ಕೊನೆಯಲ್ಲಿ ಮಹಡಿಯ ಮೇಲೆ ಕೆಲವು ಕಟ್ಟುಗಳಿವೆ ಎಂದು ತಿಳಿದು ಬಂದಿತು. ಮೇಲ್ವಿಚಾರಕರಿಗೆ ಇವನ್ನು ನೋಡಬೇಕೆಂಬ ನನ್ನ ಅಭಿಲಾಷೆಯನ್ನು ತಿಳಿಸಿದಾಗ "ಅಲ್ಲಿ ಎಲ್ಲ ಹಿಂದೆಯೇ ನೋಡಿಯಾಗಿದೆ, ಯಾವ ಉತ್ತಮ ಕೃತಿಗಳೂ ಇಲ್ಲ" ಎಂಬ ಉತ್ತರ ಬಂದಿತು. ಇದರಿಂದ ಸಮಾಧಾನಗೊಳ್ಳದ ನಾನು ಅವುಗಳನ್ನು ನೋಡಿಯೇ ತೀರಬೇಕೆಂಬ ಹಠದೊಡನೆ ಅವರನ್ನು ಒಪ್ಪಿಸುವಲ್ಲಿ ಯಶಸ್ವಿಯಾದೆನು. ಎಲ್ಲ ಕಟ್ಟುಗಳನ್ನೂ ಬಿಚ್ಚಿ, ನೋಡುತ್ತಿರುವಾಗ್ಗೆ ಅಗ್ಗಳನ 'ಚಂದ್ರಪ್ರಭಪುರಾಣ' ಎಂಬ ತಲೆಬರಹವುಳ್ಳ ಕಾಗದದ ಬಿಡಿಹಾಳೆಗಳ ಕಟ್ಟೊಂದು ದೊರೆಯಿತು. ಯಾವತ್ತೂ ತಲೆಬರಹ ನೋಡಿ ಮುಂದುವರಿಯದ ನಾನು ಅದನ್ನು ಬಿಚ್ಚಿ ಹಾಳೆಗಳನ್ನು ತಿರುವುತ್ತಾ ಆಶ್ವಾಸಾಂತ್ಯಗಳನ್ನು ನೋಡುತ್ತಾ ಹೋದಂತೆ ಒಂದು ಹಾಳೆಯಲ್ಲಿ ನಾಗವರ್ಮನ ವರ್ಧಮಾನ ಪುರಾಣದ ಒಂದು ಆಶ್ವಾಸಾಂತ್ಯದ ಬರಹ ಕಣ್ಣಿಗೆ ಬಿದ್ದಿತು. ಈ

ಹಸ್ತಪ್ರತಿಯ ಪ್ರಾಮುಖ್ಯವರಿತಿದ್ದ ನನಗೆ ರೋಮಾಂಚನವಾಯಿತು. ಆ
ಡೀ ಹಸ್ತಪ್ರತಿಯ ಹಾಳೆಗಳನ್ನೆಲ್ಲಾ ಪರಿಶೀಲಿಸಿ 'ವರ್ಧಮಾನ ಪುರಾಣ'ಕ್ಕೆ
ಂಬಂಧಿಸಿದುವನ್ನು ಕ್ರಮವಾಗಿ ಜೋಡಿಸಿ ಮೈಕ್ರೊ ಫಿಲಂ ಮಾಡಿಸಿ ತಂದೆನು;
ದನ್ನು ಕಂಡು ಹಿಡಿದ ಯಶಸ್ಸಿಗೆ ಪಾತ್ರನಾದೆನು. ಆ ಕಟ್ಟಿನಲ್ಲಿ ಅಗ್ಗಳನ
ಂದ್ರಪ್ರಭಪುರಾಣ' ಆಚಣ್ಣನ 'ವರ್ಧಮಾನ ಪುರಾಣ' ಮತ್ತು ನಾಗವರ್ಮನ
ರ್ಧಮಾನ ಪುರಾಣ' ಈ ಮೂರೂ ಕೃತಿಗಳ ಒಂದೇ ಆಕಾರದ ಮತ್ತು
ರಹದ ಹಾಳೆಗಳು ಅಸ್ತವ್ಯಸ್ತವಾಗಿ ಸೇರಿ ಕೊಂಡಿದ್ದುವು. ಹೀಗೆ ಹಸ್ತಪ್ರತಿ
ನ್ನು ಒಳತೆರೆದು ಕೂಲಂಕಷ ಪರಿಶೀಲನೆ ನಡೆಸದಿದ್ದಲ್ಲಿ ಈ ಕೃತಿ ನಮಗೆ
ರೆಯುತ್ತಿತ್ತೊ ಇಲ್ಲವೋ ಹೇಳುವುದು ಕಷ್ಟವಾಗಿದೆ.

ಹಾಗೆಯೆ ನಾನು ಪದ್ಮಕವಿಯ 'ವರ್ಧಮಾನ ಚರಿತೆ'ಯನ್ನು ಸಂಪಾದಿ
ತ್ತಿದ್ದಾಗ ದೊರೆಯುವ ಎಲ್ಲ ಪ್ರತಿಗಳ ಪಾಠಾಂತರಗಳನ್ನು ಗುರುತಿಸುತ್ತಿದ್ದೆನು.
ಕ್ರೊಫಿಲಂ ರೂಪದಲ್ಲಿ ಪದ್ಮಕವಿಯ ಹೆಸರಿನಲ್ಲಿದ್ದ ಒಂದು ಹಸ್ತಪ್ರತಿ
ದುವರೆಗೂ ಗೊತ್ತಿಲ್ಲದಿದ್ದ ಜಿನಸೇನ ದೇಶಪ್ರತಿಯ 'ವರ್ಧಮಾನ ಪುರಾಣ'ವೆಂಬ
ಂಗತ್ಯ ಕೃತಿ ಎಂಬುದು ತಿಳಿದು ಬಂದಿತು. ಮತ್ತೊಂದು ಸಂದರ್ಭದಲ್ಲಿ
ಸಕೃತಿ ದೊರೆತುದೆಂದರೆ ಮೂಡಬಿದರೆಯ ಜೈನ ಧರ್ಮಶಾಲೆಯಲ್ಲಿಯೆ.
ಪ್ರತಿಯ ತಲೆಬರಹ ಬಂದುವರ್ಮನ 'ಜೀವಸಂಬೋಧನಂ' ಎಂದಿದ್ದಿತು.
ದೇ ರೀತಿಯಲ್ಲಿ ಅದು ಗ್ರಂಥ ಸೂಚಿಯಲ್ಲಿಯೂ ಅಚ್ಚಾಗಿದ್ದಿತು. ಆದರೆ
ರೆದು ನೋಡಿದಾಗ ಬೇರೆ ಕೃತಿಯಾಗಿರುವುದು ಕಂಡುಬಂದಿತು. 'ಜೀವ
ಬೋಧನೆ'ಯ ಪರಿಚಯ ನನಗಿದ್ದುದರಿಂದ ಮೊದಲು ಓದುತ್ತದ್ದಂತೆಯೇ
ದುವರೆಗೆ ಯಾರಿಗೂ ತಿಳಿಯದಿದ್ದ ಬಂಧುವರ್ಮನ 'ಸತಿಧರ್ಮಸಾರ'ವೆಂಬ
ಸ ಸಾಂಗತ್ಯ ಕೃತಿಯೆಂಬುದು ಖಚಿತವಾಯಿತು.

ಹೀಗೆ ಒಂದು ಕೃತಿಯನ್ನು ಮತ್ತೊಂದರ ಹೆಸರಿನಲ್ಲಿ ಗುರುತಿಸಿರುವುದು
ಡದಂತೆ ಇತರ ಭಾಷೆಗಳಲ್ಲಿಯೂ ಕಂಡು ಬರುತ್ತದೆ. ಕಲ್ಕತ್ತದ ಚಿಂತಾಹರಣ
ಕ್ರವರ್ತಿ ಅವರು ತಮ್ಮ ಲೇಖನದಲ್ಲಿ[1] ನಿಜಾನಂದನಾಥನ ತಾಂತ್ರಿಕ ಗ್ರಂಥ

---

Chinthaharan Chakravarti : Study of Manuscripts
Page 78

ವೊಂದು ನಾಲ್ಕು ಬೇರೆ ಬೇರೆ ವರ್ಣನಾತ್ಮಕ ಸೂಚೀಗ್ರಂಥಗಳಲ್ಲಿ ನಾಲ್ಕು ಬೇರೆ
ಬೇರೆ ಹೆಸರುಗಳಿಂದ ವರ್ಣಿತವಾಗಿರುವುದನ್ನು ಉಲ್ಲೇಖಿಸಿದ್ದಾರೆ. 'ಮನೋರಮಾ
ಕುಚಮರ್ದಿನಿ' ಎಂಬ ವ್ಯಾಕರಣ ಗ್ರಂಥವನ್ನು ಶೃಂಗಾರಕಾವ್ಯವೆಂದು ವರ್ಣಿಸ
ಲಾಗಿದೆ ಎಂದು ಹೇಳಿದ್ದಾರೆ. ಹೀಗೆಯೇ ಇವರು ಇನ್ನೂ ಕೆಲವು ಗ್ರಂಥಗಳನ್ನು
ತಪ್ಪು ತಪ್ಪಾಗಿ ಗುರುತಿಸಿರುವುದನ್ನು ಉಲ್ಲೇಖಿಸಿದ್ದಾರೆ. ಇದಕ್ಕೆ ಹಸ್ತಪ್ರತಿಗಳಲ್ಲಿ
ಶ್ರದ್ಧಾಸಕ್ತಿಗಳ ಕೊರತೆ ಮತ್ತು ಇಂತಹ ಕೆಲಸ ಮಾಡುವವರಿಗೆ ಸಾಕಷ್ಟು
ಪ್ರೋತ್ಸಾಹವಿಲ್ಲದಿರುವುದು ಮುಖ್ಯ ಕಾರಣವೆಂದು ಹೇಳಿದ್ದಾರೆ.

ಶ್ರದ್ಧಾಸಕ್ತಿಗಳಿಂದ ಹಸ್ತಪ್ರತಿಗಳ ಪರಿಶೀಲನೆ ನಡೆಸಿದಾಗ ಮಾತ್ರ ನಮಗೆ
ಅಪೂರ್ವ ಕೃತಿಗಳು ದೊರೆತು ಸಾಹಿತ್ಯಕ್ಕೆ ಸೇರ್ಪಡೆಯಾಗುವುದೇ ಹೊರತು
ಇಲ್ಲದಿದ್ದಲ್ಲಿ ಸಾಧ್ಯವಾಗುವುದಿಲ್ಲ. ಇವು ಯಾರ ಕಣ್ಣಿಗೂ ಬೀಳದೆ ಹಾಗೆಯೇ
ಹಾಳಾಗಿ ಹೋಗುವ ಸಂಭವ ಇಲ್ಲದಿಲ್ಲ. "ಎಷ್ಟೋ ಅಪೂರ್ವ ಹಸ್ತಪ್ರತಿಗಳು
ಗ್ರಂಥಭಂಡಾರಗಳಲ್ಲಿಯೇ ಹುದುಗಿದ್ದು ವಿದ್ವಾಂಸರ ಲಕ್ಷ್ಯಕ್ಕೆ ಬಾರದಂತೆ ತಲೆ
ತಪ್ಪಿಸಿಕೊಂಡು ಇರುವ ಸಂಭವವುಂಟು"2 ಎಂದು ಡಾ॥ ಜಿ. ವರದರಾಜ
ರಾಯರು ಹೇಳಿದ್ದಾರೆ. ಮೇಲಣ ನನ್ನ ನಿರೂಪಣೆಯಿಂದ ಕಂಡುಬರುವ ಅಂಶ
ವೇನೆಂದರೆ ಅವು ತಲೆತಪ್ಪಿಸಿಕೊಂಡಿರುವುದಿಲ್ಲ; ನಾವು ಅವುಗಳನ್ನು ಗುರುತಿಸಲು
ಸರಿಯಾದ ಪ್ರಯತ್ನ ಮಾಡುವುದಿಲ್ಲವೆಂಬುದು ನಿಶ್ಚಿತವಾಗುತ್ತದೆ.

ಈಗ ತಿಳಿದು ಬರುವಂತೆ ಅನೇಕ ಅತ್ಯುತ್ತಮ ಕನ್ನಡ ಗ್ರಂಥಗಳು ಮಣ್ಣಿ
ಪಾಲಾಗಿವೆ. 'ಹರಿವಂಶ' 'ಶೂದ್ರಕ' 'ರಘುವಂಶ ಪುರಾಣ' 'ಭುವನೈಕ
ರಾಮಾಭ್ಯುದಯ' ಮೊದಲಾದ ಹೆಸರು ತಿಳಿಯುವ ಕೆಲವು ಮಹತ್ಕೃತಿಗಳೂ,
ಹೆಸರೇ ಇಲ್ಲದಂತೆ ಹಾಳಾಗಿ ಹೋಗಿರುವ ಹಲವಾರು ಕೃತಿಗಳೂ ನಮಗೆ ಇಂದು
ದೊರೆಯದಾಗಿವೆ. ಅತ್ಯಂತ ಉಪಯುಕ್ತವಾದ ಅನೇಕ ಹಳೆಯ ಗ್ರಂಥಗಳು
ಇಂದು ಕೂಡ ಹುಳುಗಳ ಪಾಲೋ ಕೆರೆ ನದಿಗಳ ಪಾಲೋ ಆಗುತ್ತಿವೆ. ಹಲವು
ಓಲೆ ಪ್ರತಿಗಳನ್ನು ಕಟ್ಟಿಗೆಗಳಾಗಿ ಉಪಯೋಗಿಸಿರುವುದುಂಟು. ಹಲವು ಮನೆ
ಗಳಲ್ಲಿ ಇಂದಿಗೂ ಓಲೆ ಕಟ್ಟುಗಳು ಪೂಜಾ ಗೃಹವನ್ನು ಸೇರಿ ಹುಳುಗಳ ಆಹಾರ

2. ಹಸ್ತಪ್ರತಿಶಾಸ್ತ್ರ ಪುಟ : 58

ವಾಗುತ್ತಿರುವುದೂ, ಎಣ್ಣೆ ಬೆಣ್ಣೆಗಳ ಮಜ್ಜನದಿಂದ ಕಟ್ಟಿಗೆಯಂತಾಗಿರುವುದೂ ತೀರಾ ಶೋಚನೀಯ ಸಂಗತಿ. ಕೆಲವರಲ್ಲಿ ಹೊರಗೆ ಕೊಡಬಾರದೆಂಬ ಅಂಧಃ ಶ್ರದ್ಧೆ, ಕೊಟ್ಟರೆ ಒಳಗಿರಬಹುದಾದ ಮನೆತನದ ಗುಟ್ಟು ಎಲ್ಲಿ ರಟ್ಟಾಗುವುದೋ ಎಂಬ ಹೆದರಿಕೆ ಅಪಾರ ಜ್ಞಾನರಾಶಿಯನ್ನೇ ಕ್ರಿಮಿಕೀಟಗಳ ತುತ್ತಾಗಿಸಿದೆ.

ಹೀಗೆ ಹಲವಾರು ಕಡೆಗಳಲ್ಲಿ ಹಾಳಾಗುತ್ತಿರುವ ಹಸ್ತಪ್ರತಿಗಳನ್ನು ಸಂಗ್ರಹಿಸುವುದರಿಂದ ಎಷ್ಟೋ ಕೃತಿಗಳನ್ನು ಸಂರಕ್ಷಿಸಿದಂತಾಗುತ್ತದೆ. ಇಂತಹ ಕಾರ್ಯಗಳಿಂದ ಹೊಸ ಹೊಸ ಕೃತಿಗಳು ಬೆಳಕಿಗೆ ಬರುತ್ತಲೇ ಇರುತ್ತವೆ. ಈ ಕೆಲಸ ವ್ಯಾಪಕವಾಗಿ ತ್ವರಿತವಾಗಿ ನಡೆಯಬೇಕಾಗಿದೆ.

# ಹಸ್ತಪ್ರತಿ ಸೂಚಿಗಳು

ಸಂಗ್ರಹಿಸಿದ ಹಸ್ತಪ್ರತಿಗಳಿಗೆ ಮೊದಲು ಮಾಡಬೇಕಾದ ತುರ್ತು ಕೆಲಸ ವೆಂದರೆ ಅವುಗಳನ್ನು ಚೊಕ್ಕಟಗೊಳಿಸುವುದು. ಪತ್ರದ ಅಥವಾ ಹಾಳೆಯ ಪ್ರತಿಯೊಂದು ಪಕ್ಕವನ್ನೂ ಕುಂಚದಿಂದ ಇಲ್ಲವೆ ಬಟ್ಟೆಯಿಂದ ನಯವಾಗಿ ಒರೆಸಿ ಅದರಲ್ಲಿರಬಹುದಾದ ಧೂಳನ್ನು ಮೊದಲು ಹೋಗಲಾಡಿಸಬೇಕು. ಅನಂತರ ಪತ್ರಸಂಖ್ಯೆಗನುಸಾರವಾಗಿ ಜೋಡಿಸಿ ಲುಪ್ತ ಅಥವಾ ಹರಿದ ಪತ್ರಸಂಖ್ಯೆಗಳನ್ನು ಗುರುತಿಸಿಕೊಳ್ಳಬೇಕು. ಹಸ್ತಪ್ರತಿ ಸಂಖ್ಯೆ, ಕರ್ತೃ, ಕೃತಿ, ಭಾಷೆ, ಲಿಪಿ, ಪತ್ರ ಸಂಖ್ಯೆ, ಗ್ರಂಥ ಸಂಖ್ಯೆ ದಾನಿಗಳ ಇಲ್ಲವೆ ಮಾರಾಟಗಾರರ ವಿಳಾಸ ಸಮಗ್ರ ಅಥವಾ ಅಸಮಗ್ರ ಮೊದಲಾದ ಅಗತ್ಯವಾದ ವಿವರಗಳನ್ನು ಸೂಚೀ ಪಟ್ಟಿಕೆಯಲ್ಲಿ ಹಾಗೂ ದಾಖಲೆ ರಿಜಿಸ್ಟರಿನಲ್ಲಿ ನಮೂದಿಸಬೇಕು. ಜೊತೆಗೆ ಹಸ್ತಪ್ರತಿಗೆ ವರ್ಗೀಕರಣ ಸಂಖ್ಯೆಯನ್ನು ಕೊಟ್ಟು ಇದನ್ನು ದಾಖಲೆ ರಿಜಿಸ್ಟರಿನಲ್ಲಿಯೂ ಸೂಚೀ ಪಟ್ಟಿಕೆಯಲ್ಲಿಯೂ ಗ್ರಂಥಪಾಲನಾ ನಿಯಮಕ್ಕನುಸಾರವಾಗಿ ದಾಖಲಿಸ ಬೇಕು. ದಾಖಲೆ ರಿಜಿಸ್ಟರು ಹಸ್ತಪ್ರತಿ ಭಂಡಾರದಲ್ಲಿ ಶಾಶ್ವತವಾಗಿರಬೇಕಾದುದ ರಿಂದ ಉತ್ತಮ ಕಾಗದವನ್ನೊಳಗೊಂಡ ರಿಜಿಸ್ಟರನ್ನು ಉಪಯೋಗಿಸಬೇಕು.

ಮೇಲೆ ಹಸ್ತಪ್ರತಿಯ ವಿವರಗಳನ್ನೊಳಗೊಂಡ ಸೂಚೀಪಟ್ಟಿಕೆ ತಯಾರಿಕೆ ಯನ್ನು ಹೇಳಲಾಗಿದೆ. ಅದರಂತೆ ಎಲ್ಲ ಹಸ್ತಪ್ರತಿಗಳ ಸೂಚೀಪಟ್ಟಿಕೆಗಳನ್ನೊಳ ಗೊಂಡ ಹಸ್ತಪ್ರತಿ ಸೂಚಿಯನ್ನು ಇಲ್ಲವೆ ವರ್ಣನಾತ್ಮಕ ಸೂಚಿಯನ್ನು ಒದಗಿಸು ವುದು ಅತ್ಯಂತ ಮುಖ್ಯವಾದುದಾಗಿದೆ. ಇದರಿಂದ ಗ್ರಂಥಭಂಡಾರದಲ್ಲಿರುವ ಹಸ್ತ ಪ್ರತಿಗಳ ವಿವರ ಎಲ್ಲ ಕಡೆಯ ಆಸಕ್ತರಿಗೂ ದೊರೆತಂತಾಗುತ್ತದೆ. ಹಸ್ತಪ್ರತಿ ಸೂಚಿಯಲ್ಲಿ ಸೂಚೀಪಟ್ಟಿಕೆಗಳಲ್ಲಿ ಕೊಟ್ಟಿರುವಷ್ಟು ವಿಷಯವನ್ನು ನಮೂದಿಸಿದರೆ ಸಾಕಾಗುತ್ತದೆ. ವರ್ಣನಾತ್ಮಕ ಸೂಚಿಗಳಲ್ಲಿ ಮಾತ್ರ ಸಾಕಷ್ಟು ವಿವರಗಳನ್ನು ಒದಗಿಸಬೇಕಾಗುತ್ತದೆ. ಕರ್ತೃ ಕೃತಿ ಕಾಲ ಭಾಷೆ ಲಿಪಿ ಪತ್ರಸಂಖ್ಯೆ, ಪತ್ರದ ಒಂದು ಮಗ್ಗುಲಲ್ಲಿರುವ ಪಂಕ್ತಿಗಳು, ಪ್ರತಿ ಪಂಕ್ತಿಯಲ್ಲಿರುವ ಸರಾಸರಿ ಅಕ್ಷರಗಳು, ಸಮಗ್ರ ಅಥವಾ ಅಸಮಗ್ರ, ಪ್ರತಿಯಕಾಲ, ಲುಪ್ತ ಅಥವಾ ಹರಿದ

ಹಾಳೆಗಳ ವಿವರ, ಹಸ್ತಪ್ರತಿಯ ವಸ್ತು, ಶುದ್ಧಾಶುದ್ಧ, ಪ್ರತಿ ಮಾಡಿದವರ ಹೆಸರು, ಹಸ್ತಪ್ರತಿ ದೊರೆತ ಸ್ಥಳ, ಅಚ್ಚಾಗಿದೆಯೆ ಇಲ್ಲವೆ ಮುಂತಾದ ವಿಶೇಷ ವಿಷಯುಗಳನ್ನು ಕೊಡಬೇಕಾಗುತ್ತದೆ. ಅಲ್ಲದೆ ಕೃತಿಯ ಆದಿ ಅಂತ್ಯ ಭಾಗಗಳನ್ನೂ ಕವಿಯ ಹೆಸರು ಕಾಲ ಪ್ರತಿಕಾರರ ಹೆಸರು ಬರುವ ಭಾಗಗಳನ್ನೂ ಉದ್ಧರಿಸಬೇಕಾಗುತ್ತದೆ. ಹೀಗೆ ಉದ್ಧರಿಸುವಾಗ ಮೂಲದ ಯಥಾವತ್ತಾದ ನಕಲಾಗಿದ್ದರೆ ಹಸ್ತಪ್ರತಿಯ ಲಕ್ಷಣಗಳನ್ನು ತಿಳಿಯಲು ಸಹಾಯಕವಾಗುತ್ತದೆ. ಇದರಿಂದ ಪ್ರತಿಕಾರರ ಪೌಢತೆಯನ್ನೂ ಅರಿಯಬಹುದಾಗಿದೆ [ಈ ಉದ್ದೇಶದಿಂದಲೇ ಪ್ರಾಚ್ಯ ವಿದ್ಯಾ ಸಂಶೋಧನಾಲಯ ಮತ್ತು ಕನ್ನಡ ಅಧ್ಯಯನ ಸಂಸ್ಥೆಗಳಿಂದ ಎರಡು ಕಂತುಗಳಲ್ಲಿ ಪ್ರಕಟವಾಗಿರುವ ಒಂಬತ್ತು ಸಂಪುಟಗಳಲ್ಲಿ ಆದಿ ಅಂತ್ಯ ಭಾಗಗಳನ್ನು ಕೊಡುವಾಗ ಮೂಲದಲ್ಲಿದ್ದಂತೆಯೇ ಕೊಡಲಾಗಿದೆ. ಇವುಗಳನ್ನು ಶ್ರದ್ಧೆಯಿಂದ ಅಲ್ಪ ಸಮಯದಲ್ಲಿಯೇ ಸಿದ್ಧಪಡಿಸಿ ಪ್ರಕಟಿಸಲಾಗಿದೆ. ಆದರೆ ಇಂತಹ ಉತ್ತಮ ಕಾರ್ಯದ ಬಗ್ಗೆಯೂ ಪ್ರಶಂಸೆಯ ಮಾತಂತಿರಲಿ, ಇದರ ಮಹತ್ವವನ್ನರಿತವರೂ ಟೀಕಿಸುವುದು ವಿಷಾದನೀಯವೆಂದು ಹೇಳಲೇಬೇಕಾಗಿದೆ.]

ಹಸ್ತಪ್ರತಿಗಳ ಸೂಚೀಕರಣ ಬಹುಹಿಂದಿನಿಂದಲೂ ನಡೆದುಬಂದಿದೆ. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಬಾಡ್ಲೆಯನ್ ಗ್ರಂಥಾಲಯದಲ್ಲಿದ್ದ ಭಾರತೀಯ ಹಸ್ತಪ್ರತಿಗಳ ಸೂಚಿಯೊಂದನ್ನು ಥಿಯೋಡೋರ ಜೌಫ್ರೆಟ್ ಎಂಬ ಪಾಶ್ಚಾತ್ಯ ವಿದ್ವಾಂಸನು ಸಂಕಲಿಸಿ ೧೮೫೯ರಲ್ಲಿಯೇ ಪ್ರಕಟಿಸಿದ ; ತದನಂತರ ಪ್ರಾಂಝ ಕೀಲ್‌ಹಾರ್ನ್, ಜಾರ್ಜ್ ಬುಹ್ಲರ್, ಎ. ಸಿ. ಬರ್ನೆಲ್ ಮುಂತಾದವರು ಈ ಕೆಲಸ ಮುಂದೆ ಸಾಗಿಸಿಕೊಂಡು ಬಂದು ಭಾರತದಲ್ಲಿನ ಕೆಲವೊಂದು ಗ್ರಂಥಾಲಯಗಳಲ್ಲಿನ ಹಸ್ತಪ್ರತಿಗಳ ಸೂಚಿಗಳನ್ನು ಸಂಕಲಿಸಿ ಈ ಮಹಾಕಾರ್ಯಕ್ಕೆ ನಾಂದಿ ಮಾಡಿದರು. ಕೀಲ್‌ಹಾರ್ನ್ ಆಗಿನ ಮುಂಬೈ ಪ್ರಾಂತದ ದಕ್ಷಿಣ ಹಾಗೂ ಮಧ್ಯ ಪ್ರಾಂತದಲ್ಲಿನ ವಿಭಾಗದಲ್ಲಿದ್ದ ಖಾಸಗಿ ಹಸ್ತಪ್ರತಿಗಳ ಗ್ರಂಥಾಲಯಗಳ ಸೂಚಿಗಳನ್ನು ತಯಾರಿಸಿದರೆ, ಬುಹ್ಲರ್ ಅವರು ಗುಜರಾತ, ಸಿಂಧ, ರಾಜಪುತಾನಾ ಮುಂತಾದುವುಗಳಲ್ಲಿ ಸಂಗ್ರಹಿಸಿದ ಹಸ್ತಪ್ರತಿಗಳ ಸೂಚಿಗಳನ್ನು ಹಾಗೂ ಬರ್ನೆಲ್ ಅವರು ತಂಜಾವೂರು ಅರಮನೆಯಲ್ಲಿದ್ದ ಹಸ್ತಪ್ರತಿಗಳ ಸೂಚಿಗಳನ್ನು ತಯಾರಿಸಿದರು. ಈ ದಿಸೆಯಲ್ಲಿ ಕೃಷಿ ಮಾಡಿದ ಪ್ರಪ್ರಥಮ ಭಾರತೀಯರೆಂದರೆ

ರಾಮಕೃಷ್ಣ ಗೋಪಾಳ ಭಂಡಾರಕರ, ಹರಿಪ್ರಸಾದ ಶಾಸ್ತ್ರಿ, ನ್ಯಾಯಭೂಷಣ ಕುಂಜವಿಹಾರಿ ಮುಂತಾದವರು"[1] ಎಂದು ಶ್ರೀ ಕೆ. ಎಸ್. ದೇಶಪಾಂಡೆ ಅವರು ಹೇಳಿದ್ದಾರೆ.

ಕನ್ನಡ ಹಸ್ತಪ್ರತಿಗಳ ಸೂಚೀಪಟ್ಟಿಕೆಗಳು ಸೇರಿರುವ ಮೊಟ್ಟ ಮೊದಲ ವರ್ಣನಾತ್ಮಕ ಹಸ್ತಪ್ರತಿ ಸೂಚಿಯೆಂದರೆ ಎಚ್. ಎಚ್. ವಿಲ್ಸನ್ ಅವರು ಸಂಪಾದಿಸಿರುವ 'A Descriptive catalogue of the Oriental Manuscripts Vol I, 1828' ಎಂಬುದಾಗಿದೆ. ಇದರಲ್ಲಿ ೧೫೨ ಕನ್ನಡ ಕೃತಿಗಳ ವಿವರವಿದೆಯೆಂದು ಶ್ರೀ ಎಚ್. ದೇವೀರಪ್ಪನವರು ತಿಳಿಸಿರುವುದನ್ನು ಶ್ರೀ ಎಸ್. ಶಿವಣ್ಣನವರು ಉಲ್ಲೇಖಿಸಿದ್ದಾರೆ.[2] ಇದು ಮೆಕೆಂಜಿ ಅವರು ಸಂಗ್ರಹಿಸಿದ ಹಸ್ತಪ್ರತಿಗಳ ಸೂಚಿಯಾಗಿದೆ. ಹೀಗೆ ಕನ್ನಡ ಹಸ್ತಪ್ರತಿಗಳ ಸೂಚೀಪಟ್ಟಿಕೆಗಳನ್ನೊಳಗೊಂಡ ಮತ್ತೂ ಕೆಲವು ಸೂಚಿಗಳು ಪ್ರಕಟವಾದರೂ ಕನ್ನಡಕ್ಕೇ ಮೀಸಲಾಗಿ ಪ್ರಕಟಗೊಂಡ ವರ್ಣನಾತ್ಮಕ ಸೂಚಿಗಳೆಂದರೆ ಮದರಾಸು ಸರ್ಕಾರೀ ಪ್ರಾಚ್ಯಕೋಶಾಗಾರದಿಂದ ಸಿದ್ಧವಾದುವಾಗಿವೆ. ಈ ಸಂಸ್ಥೆಯು ೧೯೩೪ರಷ್ಟು ಹಿಂದೆಯೇ ಪ್ರಕಟಿಸಿ ಉಳಿದ ವಿಶ್ವವಿದ್ಯಾನಿಲಯಗಳಿಗೆ ಸಂಸ್ಥೆಗಳಿಗೆ ಮಾದರಿಯಾಯಿತು. ಈ ಸೂಚಿಗಳಲ್ಲಿ ಕ್ರಮಾಂಕ ಶಿರೋನಾಮೆ, ವಸ್ತು, ಆಕಾರ, ಪತ್ರಸಂಖ್ಯೆ, ಸಾಲುಗಳು, ಲಿಪಿಸ್ಥಿತಿ, ಬರವಣಿಗೆ ಪೂರ್ಣಾಪೂರ್ಣ ವಿವರಣೆ, ಪ್ರಾರಂಭ, ಕೊನೆ, ಸಮಾಪ್ತಿ ವಚನ ಇದಿಷ್ಟನ್ನೂ ಕೊಡುವುದಲ್ಲದೆ ಕೆಲವು ಪ್ರತಿಗಳಿಗೆ ಮೂಲ, ಬರೆಯಲು ಪ್ರೇರಣೆ ಮೊದಲಾದ ಮಾಹಿತಿಯನ್ನೂ ನೀಡಲಾಗಿದೆ. ಈ ವಿವರಗಳಲ್ಲಿ ಕೆಲವನ್ನು ಬಿಟ್ಟು ಕೆಲವನ್ನು ಸೇರಿಸಿ ತಮಗೆ ಸರಿತೋರಿದ ರೀತಿಯಲ್ಲಿ ಮೈಸೂರು ಕರ್ಣಾಟಕ ಉಸ್ಮಾನಿಯಾ ಬೆಂಗಳೂರು ಮೊದಲಾದ ವಿಶ್ವವಿದ್ಯಾನಿಲಯಗಳು ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು ಪ್ರಕಟಿಸಿವೆ. ಯಾವ ವಿವರಣೆಯೂ ಇಲ್ಲದೆ ಕೃತಿ, ಕರ್ತೃ, ಪತ್ರ– ಮೊದಲಾದ ಸಾಮಾನ್ಯ ವಿಷಯಗಳೊಡನೆ ಹಸ್ತಪ್ರತಿಗಳ ಪಟ್ಟಿಯನ್ನು ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ ೧೯೨೧ರಲ್ಲಿ ಪ್ರಕಟಿಸಿದೆ.

---

1. ಕರ್ಣಾಟಕ ಭಾರತಿ ೧-೧-೨, ೧೯೬೨, ಪು. ೧೫೪-೫೫
2. ಹಸ್ತಪ್ರತಿಶಾಸ್ತ್ರ, ಪು. ೭೦

ದರಲ್ಲಿ ೧೫೧೧ ಕೃತಿಗಳನ್ನು ನಮೂದಿಸಿದೆ. ಇದೇ ರೀತಿಯಲ್ಲಿ ಕೆ.ಜಿ. ಕುಂದಣ ರರು ತಾವು ಸ್ವಾದಿ, ಸಿರ್ಸಿ– ಮೊದಲಾದೆಡೆಗಳಲ್ಲಿ ಪರಿಶೀಲಿಸಿದ ಹಸ್ತಪ್ರತಿಗಳ ಟ್ಟಿಯನ್ನು ೧೯೨೯ರಲ್ಲಿ ಜಯಕರ್ನಾಟಕದಲ್ಲಿ ಪ್ರಕಟಿಸಿದ್ದಾರೆ. ಮದರಾಸು ರ್ಕಾರೀ ಪ್ರಾಚ್ಯ ಕೋಶಾಗಾರದಲ್ಲಿ ಸಂಗ್ರಹವಾಗಿದ್ದ ಕನ್ನಡ ಹಸ್ತಪ್ರತಿಗಳ ಕಾರಾದಿ ಪಟ್ಟಿಯನ್ನು ಎನ್. ಕುಪ್ಪುಸ್ವಾಮಿಶಾಸ್ತ್ರಿಯವರು ಸಂಪಾದಿಸಿದ್ದು ೯೨೯ರಲ್ಲಿ ಪ್ರಕಟವಾಗಿದೆ. ಇದರಲ್ಲಿ ೧೫೪೦ ಕೃತಿಗಳ ವಿವರವಿದೆ. ಕೆ. ಭುಜ ಲಿಶಾಸ್ತ್ರಿಗಳಿಂದ ಸಂಪಾದಿತವಾಗಿ ದೇವನಾಗರಿ ಲಿಪಿಯಲ್ಲಿ ೧೯೪೮ರಲ್ಲಿ ಪ್ರಕಟ ಾಗಿರುವ 'ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥ ಸೂಚಿ'ಯು ತುಂಬಾ ಪಯುಕ್ತ ಮಾಹಿತಿಯನ್ನು ನೀಡುತ್ತದೆ. ಇದರಲ್ಲಿ ಸಂಸ್ಕೃತ ಪ್ರಾಕೃತ ಕನ್ನಡ ್ರಂಥಗಳೆಲ್ಲವೂಸೇರ್ಪಡೆಯಾಗಿವೆ ಇಂತಹ ಹಸ್ತಪ್ರತಿಸೂಚಿಗಳು ಚಿಕ್ಕವಾಗಿ ದೊಡ್ಡ ಾಗಿ ಹಲವರಿಂದ ಸಿದ್ಧಗೊಂಡು ವಿವಿಧ ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ.

ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯಲ್ಲಿ ಇರಬೇಕಾದ ಅಂಶಗಳನ್ನು ವರಿಸುತ್ತಾ ಚಿಂತಾಹರಣ ಚಕ್ರವರ್ತಿ ಅವರು ಕೆಲವು ಉಪಯುಕ್ತ ಸಲಹೆ ಳನ್ನು ನೀಡಿದ್ದಾರೆ.2 ಇವುಗಳಲ್ಲಿ ಕೆಲವನ್ನು ನಾವು ಗಮನಿಸಬಹುದಾಗಿದೆ. ಚ್ಚಾದ ಗ್ರಂಥಗಳ ಬಗೆಗೆ ದೊರೆಯುವ ಹಸ್ತಪ್ರತಿಗಳ ವಿವರಣೆಗಳನ್ನು ೂಡುವಾಗ ಪ್ರಕಟವಾದ ಗ್ರಂಥಗಳಿಗಿಂತ ಹೆಚ್ಚಿನ ಅಂಶಗಳಿದ್ದರೆ ಅದನ್ನು ಾತ್ರ ಸೂಚಿಸಬೇಕು ; ಅಲ್ಲದೆ ಇಂತಹ ಪ್ರತಿಗಳ ಭಾಗಗಳನ್ನು ಉದ್ಧರಿಸ ೀಕಾದುದು ಅನಾವಶ್ಯಕ. ಇವುಗಳಿಂದ ಸೂಚೀ ಗ್ರಂಥಗಳ ಗಾತ್ರ ಕಡಿಮೆ ಾಗಲು ಸಹಾಯವಾಗುತ್ತದೆ" ಎಂದು ಹೇಳಿರುವುದು ಸರಿಯೆಂದು ಒಪ ೀಕಾಗುತ್ತದೆ. ಇಂತಹ ಪ್ರತಿಗಳ ಭಾಗಗಳನ್ನು ಉದ್ಧರಿಸುವುದರಿಂದ ಹಸ್ತಪ್ರತಿ ಳ ಸ್ವರೂಪವನ್ನು ತಿಳಿಯಬಹುದೇ ಹೊರತು ಬೇರೆ ಪ್ರಯೋಜನವಾಗುವುದಿಲ್ಲ. ಂತಹ ವಿಶೇಷಗಳೇನಾದರೂ ಇದ್ದರೆ ಅವುಗಳನ್ನು ಮಾತ್ರ ಸೂಚಿಸಿ ಮುಂದು ರಿಯಬಹುದು.

---

. ವಿವರಗಳಿಗೆ ನೋಡಿ : ಹಸ್ತಪ್ರತಿಶಾಸ್ತ್ರ, ಪು. 69–77

. Chinthaharan Chakravarthi ~ Study of Manuscripts Page : 80

ಈ ಎಲ್ಲ ಪ್ರಕಟಿತ ಹಸ್ತಪ್ರತಿ ಸೂಚಿಗಳ ಸಹಾಯದಿಂದ ಹಸ್ತಪ್ರತಿಗಳ ಸಮಗ್ರಸೂಚಿ (Catalogus Catalogorum)ಯನ್ನು ತಯಾರಿಸಿ ಪ್ರಕಟಿಸಿದಲ್ಲಿ ವಿದ್ವಜ್ಜನರಿಗೆ ಬಹುಮಟ್ಟಿನ ಉಪಕಾರವಾದಂತಾಗುತ್ತದೆ. ಎಸ್. ಶಿವಣ್ಣನವರು "ಈ ಸೂಚಿಯ ನಿರ್ಮಾಣದಲ್ಲಿ ಮಾದರಿಯಾಗಿ ಆಫ್ರೆಸ್ಟ್ (Aufrecht) catalogus catalogorum (1891, 1896, 1903 ರಲ್ಲಿ 3 ಭಾಗಗಳಲ್ಲಿ ಪ್ರಕಟವಾಗಿದೆ) ಸೂಚಿಯಲ್ಲಿನ ಕೆಲವು ಅಂಶಗಳನ್ನು ಅನುಸರಿಸಬಹುದೆಂದು ಹೇಳಿ ಅದನ್ನು ಈ ರೀತಿ ಸೂಚಿಸಿದ್ದಾರೆ.3

೧. ಸೂಚಿಯು ಅಕಾರಾದಿ ಕ್ರಮದಲ್ಲಿದೆ.

೨. ಕವಿಯ ಉಲ್ಲೇಖದೊಡನೆ ಆತನ ಲಭ್ಯ ಹಾಗೂ ಅಲಭ್ಯ ಕೃತಿಗಳ ಪಟ್ಟಿ

೩. ಕೃತಿಯ ಉಲ್ಲೇಖದೊಡನೆ ಇತರ ಪ್ರತಿಗಳು ದೊರೆಯುವ ಸ್ಥಳಗಳ ನಿರ್ದೇಶನ.

೪. ಮುದ್ರಿತ ಹಸ್ತಪ್ರತಿಗಳ ಸೂಚಿ ಮತ್ತು ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಉಲ್ಲೇಖ.

೫. ಪ್ರಕಟವಾದ ಕೃತಿಯ ವಿವರ ವಿವಿಧ ಆವೃತ್ತಿಗಳಲ್ಲಿ.

೬. ಪ್ರಕಟವಾಗದಿರುವ ಕೃತಿಯ ಬಗೆಗೆ ಪರಿಚಯಾತ್ಮಕ ಲೇಖನದ ವಿವರ.

೭. ಇತರ ಭಾಷೆಗಳಲ್ಲಿ ಕೃತಿಯ ಅನುವಾದ.

೮. ಕವಿಯ ಬಗೆಗೆ ಪ್ರಕಟಿತ ಅಪ್ರಕಟಿತ ರೂಪದ ಮಹಾಪ್ರಬಂಧಗಳು.

೯. ಕವಿ ಕೃತಿಗಳ ಬಗೆಗೆ ದೊರೆಯುವ ಸಾಹಿತ್ಯ ಚರಿತ್ರೆಯ ಸಂಗತಿಗಳು.

೧೦. ಕವಿ, ಕಾಲ, ಕೃತಿಗಳ ಬಗೆಗೆ ಸಮಕಾಲೀನ ಸಂಶೋಧನೆಯ ವಿವರ.

ಇನ್ನೂ ಸೂಚೀಕರಣವಾಗದಿರುವ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಗಳಲ್ಲದಿದ್ದರೂ ಕೊನೆಯ ಪಕ್ಷ ಸೂಚಿಗಳಾದರೂ ಪ್ರಕಟವಾಗಿ, ಮೇಲೆ ಹೇಳಿದ ಸಮಗ್ರ ಸೂಚಿ ಸಿದ್ಧವಾಗಿ ಎಲ್ಲರಿಗೂ ದೊರೆಯುವಂತಾದಲ್ಲಿ ತುಂಬಾ ಮಹತ್ವಪೂರಿತ ಕೆಲಸ ಆದಂತಾಗುತ್ತದೆ. ಇದು ಆದಷ್ಟು ಬೇಗ ಆಗಲೆಂದು ಹಾರೈಸೋಣ.

---

3. ಹಸ್ತಪ್ರತಿಶಾಸ್ತ್ರ, ಪು. 76-77

# ಹಸ್ತಪ್ರತಿ ಸಂರಕ್ಷಣೆ

ಸಂಗ್ರಹಮಾಡಿದ ಹಸ್ತಪ್ರತಿಗಳ ಸಂರಕ್ಷಣೆ ಅತ್ಯಂತ ಮಹತ್ವದ ವಿಷಯವಾಗಿದೆ. ಸಂಗ್ರಹಣಕಾರ್ಯ ಎಷ್ಟು ಶ್ರಮಪೂರಿತವೊ ರಕ್ಷಣೆಯೂ ಅಷ್ಟೇ ಕಷ್ಟಸಾಧ್ಯವಾದ ಕೆಲಸವಾಗಿದೆ. ಇವುಗಳನ್ನು ಎಚ್ಚರಿಕೆಯಿಂದ ಕಾಪಾಡದಿದ್ದಲ್ಲಿ ಎಲ್ಲಿಯೋ ಹಾಳಾಗುತ್ತಿದ್ದ ಗ್ರಂಥಗಳು ಮತ್ತೆಲ್ಲಿಯೋ ನಶಿಸಿಹೋಗುವ ಸಂಭವವಿಲ್ಲದಿಲ್ಲ. ಆದುದರಿಂದ ವಿವಿಧ ವಸ್ತುಗಳ ಹಸ್ತಪ್ರತಿಗಳಿಗೆ ಆಯಾ ವಸ್ತುವಿಗೆ ತಕ್ಕ ಉಪಚಾರ ಮಾಡಿ, ದುರಸ್ತಿಕಾರ್ಯಗಳನ್ನು ಕೈಗೊಂಡು ರಕ್ಷಣೆ ಮಾಡಬೇಕಾಗುತ್ತದೆ. ಹಸ್ತಪ್ರತಿಗಳ ಲಿಪಿಕಾರರು ಪುಸ್ತಕಗಳನ್ನು ಪರಿಪಾಲಿಸಿಕೊಂಡು ಬರಬೇಕೆಂಬುದನ್ನು



ಪುಸ್ತಕಂ ವನಿತಾ ವಿತ್ತಂ ಪರ ಹಸ್ತಗತಂ ಗತಂ
ಅಥವಾ ಪುನರಾಯಾತಂ ಜೀರ್ಣಂ ಭ್ರಷ್ಟಾಚ ಖಂಡಶಃ ॥
ತೈಲಾದ್ರಕ್ಷೇಜ್ಜಲಾದ್ರಕ್ಷೇತ್ ರಕ್ಷೇಚ್ಛಿಥಿಲ ಬಂಧನಾತ್
ಮೂರ್ಖಹಸ್ತೇ ನದಾತವ್ಯಮೇವಂ ವದತಿ ಪುಸ್ತಕಂ ॥

ಎಂದು ದುಃಖ ಮಿಶ್ರಿತವಾದ ಪರಿಹಾಸದಿಂದ ನುಡಿದಿರುವುದು ಕಾಣುತ್ತದೆ. ಪುಸ್ತಕ ವನಿತೆ ವಿತ್ತ ಈ ಮೂರು ಇತರರ ಕೈಗೆ ಸೇರಿದರೆ ಅವು ಹೋದ ಹಾಗೆಯೆ ; ಒಂದು ವೇಳೆ ಅವು ಮರಳಿಬಂದರೆ ಜೀರ್ಣವಾಗಿರುತ್ತವೆ ; ಭ್ರಷ್ಟವಾಗಿರುತ್ತವೆ ; ಇಲ್ಲವೆ ಅರ್ಧಮರ್ಧವಾಗಿರುತ್ತವೆ. ಎಣ್ಣೆ ನೀರುಗಳು ಸೋಂಕದ ಹಾಗೆ ಪುಸ್ತಕವನ್ನು ರಕ್ಷಿಸಬೇಕು. ಅವುಗಳನ್ನು ಸಡಿಲವಾಗಿ ಕಟ್ಟಬಾರದು, ಮೂರ್ಖರ ಕೈಗೆ ಅವನ್ನು ಕೊಡಕೂಡದು ... ಹೀಗೆಂದು ಪುಸ್ತಕ ಹೇಳುತ್ತದಂತೆ"[1] ಈ ಮಾತುಗಳಲ್ಲಿ ಬಹು ಭಾಗವನ್ನು ಒಪ್ಪುವುದಾದರೂ ಬೇರೆಯವರ ಹಸ್ತ ಕೊಡಬಾರದೆಂಬುದನ್ನು ಈ ಕಾಲದಲ್ಲಿ ಒಪ್ಪಲು ಸಾಧ್ಯವಾಗುವುದಿಲ್ಲ ; ಹಸ್ತಪ್ರತಿಗಳ

1. ಕನ್ನಡ ಗ್ರಂಥ ಸಂಪಾದನೆ ಪು. ೫೫

ಉಪಯೋಗವನ್ನು ಹೆಚ್ಚು ಜನ ಮಾಡಿಕೊಳ್ಳಲು ಸಹಾಯ ಮಾಡುವುದು ಗ್ರಂಥಪಾಲಕರ ಕರ್ತವ್ಯವಾಗಿದೆ. ಆದರೆ ಹೀಗೆ ಕೊಡುವಲ್ಲಿ ಮೂರ್ಖರಿಗೆ ಕೊಡಬಾರದೆಂಬುದನ್ನು ಅಕ್ಷರಶಃ ಪಾಲಿಸಬೇಕಾಗುತ್ತದೆ. ಆದರೆ ಇವರನ್ನು ಗುರುತಿಸುವುದು ಸುಲಭಸಾಧ್ಯವಲ್ಲ.

ಸಂಗ್ರಹಿಸಿದ ಹಸ್ತಪ್ರತಿಗಳಿಗೆ ಮೊದಲು ಮಾಡಬೇಕಾದ ತುರ್ತು ಕೆಲಸವೆಂದರೆ ಅವುಗಳನ್ನು ಚೊಕ್ಕಟಗೊಳಿಸುವುದು. ಅನಂತರ ದಾಖಲೆ ರಿಜಿಸ್ಟರಿನಲ್ಲಿ ನಮೂದಿಸುವುದು, ಸೂಚೀಕರಣಗಳೆಲ್ಲಾ ಮುಗಿದ ಮೇಲೆ, ಹೊರಗಣ ರಕ್ಷಾಪಟ್ಟಿಗಳಿಲ್ಲದಿದ್ದಲ್ಲಿ ಓಲೆಗಳಿಗೆ ಮರದ ಪಟ್ಟಿಗಳನ್ನು ಎರಡು ಬದಿಗೂ ಹಾಕಿ ಓಲೆಗಳ ರಂಧ್ರಕ್ಕೆ ಸರಿಹೊಂದುವಂತೆ ರಂಧ್ರಗಳನ್ನು ಮಾಡಿ ದಾರದಿಂದ ಪೋಣಿಸಿ ಕಟ್ಟಬೇಕು. ಹೀಗೆ ದಾರದಿಂದ ಕಟ್ಟುವಾಗಲೂ ಬಹಳ ಎಚ್ಚರಿಕೆ ವಹಿಸಬೇಕು. ಅದು ಯಾವುದೇ ರೀತಿಯಲ್ಲಿ ಪತ್ರಗಳಿಗೆ ಹಾನಿಯಾಗುವಂತಿರಬಾರದು. ರಂಧ್ರಕ್ಕೆ ತಕ್ಕ ದಾರವನ್ನು ಹಾಕಬೇಕು ; ದಾರವನ್ನು ಹೊರಗಣ ಪಟ್ಟಿಗೆ ಸುತ್ತು ಕಟ್ಟಿ ಅನಂತರ ಓಲೆಗಳ ರಂಧ್ರಗಳಲ್ಲಿ ಪೋಣಿಸಿರುವುದನ್ನು ನೋಡಿದ್ದೇನೆ. ಇದರಿಂದ ಕಟ್ಟಿದ ದಾರದ ಒಳಭಾಗ ಓಲೆಯ ಮೇಲೆ ಒತ್ತುವುದರಿಂದ ಆ ಭಾಗ ಹಾನಿಗೊಳಗಾಗುತ್ತದೆ. ಕಾಗದದ ಹಸ್ತಪ್ರತಿಗಳಿಗೆ ರಕ್ಷಾಪಟ್ಟಿಗಳನ್ನು ಅವುಗಳ ಅಳತೆಗೆ ಮಂದವಾದ ರಟ್ಟನ್ನೋ, ಮರದ ಹಲಗೆಯನ್ನೋ ಅಳವಡಿಸಬಹುದು. ಇಂತಹ ಯಾವುವೇ ಹಸ್ತಪ್ರತಿಗಳನ್ನು ಗ್ರಂಥ ಭಂಡಾರಕ್ಕೆ ಸೇರಿಸುವ ಮೊದಲು ಪ್ರಥಮ ಉಪಚಾರಕ್ಕೆ ಒಳಪಡಿಸುವುದು ಅತ್ಯಂತ ಅಗತ್ಯ (ನೋಡಿ : ಪ್ರಥಮ ಉಪಚಾರ)

ಹಸ್ತಪ್ರತಿಗಳಿಗೆ ಬರುವ ಅಪಾಯಗಳು ವಿವಿಧ ರೀತಿಯಾಗಿವೆ. ಕೆಲವು ಹುಳು ಹುಪ್ಪಟೆಗಳಿಂದ, ಮತ್ತೆ ಕೆಲವು ಗಾಳಿ ಬೆಳಕು ಬೆಂಕಿಗಳಿಂದ ಆಗಬಹುದು. ಗಾಳಿಯು ಅತಿ ಉಷ್ಣತೆಯಿಂದಾಗಲಿ ಅತಿ ಶೀತದಿಂದಾಗಲಿ ಕೂಡಿದ್ದರೆ ಹಸ್ತಪ್ರತಿಗಳು ಹಾಳಾಗುವುದುಂಟು. ಗಾಳಿಯಲ್ಲಿ ಅದರಲ್ಲಿಯೂ ಪಟ್ಟಣಗಳ ಗಾಳಿಯಲ್ಲಿ ಹಲವಾರು ಅನಿಲಗಳು ಸೇರಿದ್ದು ಹಸ್ತಪ್ರತಿಗಳ ಮೇಲೆ ಪರಿಣಾಮ ಬೀರುವುದು ಸಹಜವಾಗಿದೆ. ಶೀತ ಹೆಚ್ಚಾದರೆ ಬೂಷ್ಟು ಬರುತ್ತದೆ ; ಉಷ್ಣತೆ ಅಧಿಕವಾದರೆ ಹಾಳೆಗಳು ಒರಟಾಗುತ್ತವೆ. ಹೀಗೆ ಅಪಾಯವೊದಗಿಬರುವ ವಿವಿಧ ರೀತಿಗಳನ್ನು ಇಲ್ಲಿ ಗಮನಿಸಬಹುದಾಗಿದೆ.

**ಧೂಳು :** ಇದು ನೋಡಲು ಅಲ್ಪವಾದುದಾದರೂ ಇದರಿಂದ ಆಗುವ ಅನಾಹುತ ಅಲ್ಪವಲ್ಲ. ಈ ಧೂಳಿನ ಕಣಗಳ ಮೂಲಕವಾಗಿಯೇ ಕ್ರಿಮಿಕೀಟಗಳ ಅಂಡಾಣುಗಳು ಬಂದು ಹಸ್ತಪ್ರತಿಗಳಲ್ಲಿ ಸೇರುತ್ತವೆ. ಮುಂದೆ ಈ ಅಂಡಾಣು ಗಳಿಂದ ಹುಳುಗಳು ಹೆಚ್ಚುತ್ತಾ ಹೋಗಿ ಗ್ರಂಥಾಲಯವನ್ನೇ ಆಕ್ರಮಿಸಿ ಕೊಳ್ಳುತ್ತವೆ.

**ಕೀಟಗಳು :** ಜನರು ದೇಶದಿಂದ ದೇಶಕ್ಕೆ ಹೋಗುವುದು ಹಾಗೂ ಗ್ರಂಥಗಳ ಪ್ರಸಾರ ಹೆಚ್ಚಿದಂತೆಲ್ಲ ಕೀಟಗಳ ಹಾವಳಿಯೂ ಹೆಚ್ಚುತ್ತಾ ಹೋಯಿತು. ಒಂದಡೆಯಿಂದ ಮತ್ತೊಂದೆಡೆಗೆ ಕೀಟಗಳು ಹರಡಲು ಇದು ಸಹಕಾರಿಯಾಯಿತು ಆದುದರಿಂದಲೇ ವಿಶ್ವದ ಎಲ್ಲ ಭಾಗಗಳಲ್ಲಿಯೂ ವಿವಿಧ ರೀತಿಯ ಎಲ್ಲ ಕ್ರಿಮಿ ಕೀಟಗಳೂ ಕಂಡು ಬರುತ್ತವೆ. ಪೂರ್ವ ಏಷಿಯಾ, ಕಾನ್‌ಸ್ಟಾಂಟಿನೋಪಲ್ ಗ್ರೀಸ್ ಮತ್ತು ಬ್ರಿಟನ್ ದೇಶದ ಮಠಗಳಲ್ಲಿನ ಗ್ರಂಥಾಲಯಗಳು ಗ್ರಂಥ ಹುಳುಗಳ ಹಾವಳಿಗೆ ತುತ್ತಾಗಿವೆ. ರೆಮೆಡಿಯಮ್ ಕಾಂಟ್ರ ವರ್ಮ್ಸ್ ಲಿಬ್ರೊರಮ್ (Remedium Contra Vermes Librorum) ಎಂಬ ೧೩ನೆಯ ಶತಮಾನದ ಒಂದು ಹಸ್ತಪ್ರತಿ ಇದ್ದಿತು ಎಂದು ತಿಳಿದು ಬರು ವುದರಿಂದ ಆ ಕಾಲಕ್ಕೇ ಗ್ರಂಥಗಳಿಗೆ ಕೀಟಗಳ ಹಾವಳಿ ಬಹಳವಾಗಿದ್ದಿತೆಂದು ಊಹಿಸಬಹುದು. ಸಿ. ಎಂ. ಇ. ಟೋನ್ ಎಂಬಾತನು ೧೯೩೫ರಲ್ಲಿ ಪ್ರಕಟವಾದ ಆಟೊ ಬಯಾಗ್ರಫಿ ಆಫ್ ಮಾಸ್ಟರ್ ಬುಕ್‌ವರ್ಮ್ ಎಂಬ ತನ್ನ ಗ್ರಂಥದಲ್ಲಿ 'ಅಜಿ ಆಫ್ ಮಾಮ್ಸ್ ಬರಿಯಲ್ಲಿನ ಆಂಥಾಲಜಿ ಆಫ್ ಕಾಫಲಸ್ ಗ್ರಂಥದಲ್ಲಿ ಹುಟ್ಟಿದ ಒಂದು ಗ್ರಂಥ ಹುಳು ಕೊನೆಗೆ ಮಿಚಿಗನ್ ಸ್ಟೇಟ್ ವಿಶ್ವವಿದ್ಯಾನಿಲಯದ ಡಾ॥ ಸ್ಯಾಮ್ಯುಯಲ್ ಜಾನ್‌ಸನ್ ಅರ್ಥಕೋಶದ ಮೊದಲನೆಯ ಮುದ್ರಣ ದಲ್ಲಿ ಬದುಕಿರಬಹುದು' ಎಂದು ಹೇಳಿರುವ ಮಾತು ಅರ್ಥಪೂರ್ಣವಾಗಿದೆ. ಇತ್ತೀಚೆಗೆ ಕಂಡುಹಿಡಿದ ಗ್ರಂಥಪಾಲಕರ ದೃಷ್ಟಿಗೆ ಬೀಳದೆಯೇ ಪುಸ್ತಕಗಳು ಮತ್ತು ಕಪಾಟುಗಳನ್ನು ತಿನ್ನುವ ಜೀರುಂಡೆಮರಿ (Beetle Carvae)ಯು ಇತರ ಎಲ್ಲ ಗ್ರಂಥವೈರಿಗಳಿಗಿಂತಲೂ ಹೆಚ್ಚು ಆತಂಕಕಾರಿಯಾಗಿದೆ.

ಈ ಕೀಟಗಳ ಬೆಳವಣಿಗೆಯನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಒಂದು ಪೂರ್ಣವಾಗಿ ಬೆಳೆಯದ ಪೊರೆಹುಳುಗಳು. ಇವು ನೋಡುವುದಕ್ಕೆ ಎಲ್ಲ

ವಿಧದಿಂದಲೂ ಪೂರ್ಣವಾಗಿ ಬೆಳೆದ ಹುಳುಗಳಂತೆಯೇ ಕಂಡರೂ ರೆಕ್ಕೆಗಳು ಪೂರ್ಣವಾಗಿ ಬಂದಿರುವುದಿಲ್ಲ. ಈ ಗುಂಪಿಗೆ ಸೇರುವ ಕೀಟಗಳೆಂದರೆ ಜಿರಲೆ, ಗೆದ್ದಲು, ಬುಕ್‌ಲೈಸ್ ಮತ್ತು ಸಿಲ್ವರ್ ಫಿಷ್. ಎರಡನೆಯ ಗುಂಪಿಗೆ ಸೇರುವ ಕೀಟಗಳೆಂದರೆ ತಮ್ಮ ಜೀವಿತ ವೇಳೆಯಲ್ಲಿ ಗಮನಿಸಬಹುದಾದ ರೂಪಾಂತರ ಗಳನ್ನು ಹೊಂದುವ ಜೀರುಂಡೆಮರಿ ಅಥವಾ ಸಾಮಾನ್ಯವಾಗಿ ಕರೆಯುವ ಪುಸ್ತಕಕ್ರಿಮಿ. ಚೆನ್ನಾಗಿ ಬೆಳೆದ ಜೀರುಂಡೆಮರಿಯು ವಯಸ್ಸಾದ ಹುಳುವನ್ನು ಯಾವ ರೀತಿಯಲ್ಲಿಯೂ ಹೋಲುವುದಿಲ್ಲ. ಇದರಲ್ಲಿ ಸಿತೊದ್ರಿಪ ಪನಿಸಿಯಮ್ ಎಂಬ ಜಾತಿಯದು ಯೂರೋಪ್ ಮತ್ತು ಅಮೆರಿಕಾ ದೇಶಗಳಲ್ಲಿ ಕಂಡುಬರುತ್ತದೆ. ಭಾರತದಲ್ಲಿ ಮತ್ತೊಂದು ಜಾತಿಯ ಗ್ಯಾಸ್ಟ್ರಲಸ್ ಇಂಡಿಕಸ್ ಎಂಬುದು ಸಾಮಾನ್ಯವಾಗಿದೆ. ಇದು ಎಲ್ಲ ವಿಧವಾದ ವಸ್ತುವನ್ನೂ ತಿಂದು ಅರಗಿಸಿಕೊಳ್ಳುವ ಶಕ್ತಿಯನ್ನು ಪಡೆದುದಾಗಿದೆ. ಇದು ಮಾಡುವ ಮತ್ತೊಂದು ಕೆಡುಕೆಂದರೆ ತನಗೆ ದೊರೆತುದನ್ನು ತಿಂದು ಮುಗಿಸುವುದಲ್ಲದೆ ಗ್ರಂಥಗಳ ಅಂಚುಗಳಲ್ಲಿ ಮೊಟ್ಟೆಗಳನ್ನಿಡುತ್ತದೆ. ಈ ಮೊಟ್ಟೆಗಳು ೫-೧೦ ದಿನಗಳಲ್ಲಿ ಮರಿಗಳಾಗಿ ತಮ್ಮ ತಾಯಿಯ ಕೆಲಸವನ್ನು ಮುಂದುವರಿಸುತ್ತವೆ. ಇವು ಗ್ರಂಥಗಳ ಒಂದು ಪಕ್ಕದಿಂದ ಹಾಳೆ ಗಳನ್ನು ಕೊರೆದು ತಿನ್ನುತ್ತಾ ಹೋಗಿ, ಮತ್ತೆ ಮೇಲೆ ಬಂದು ತಮ್ಮ ಕಾರ್ಯವನ್ನು ಪ್ರಾರಂಭಿಸುತ್ತವೆ. ಹೀಗೆ ಸುಮಾರು ೧೫ ದಿನಗಳು ತಮ್ಮ ಕಾರ್ಯ ಚಟುವಟಿಕೆಗಳನ್ನು ನಡೆಸಿದ ಮೇಲೆ ಪ್ರಾಪ್ತ ವಯಸ್ಸಿನವಾಗಿ ಬೆಳೆದು ಮೊಟ್ಟೆಯಿಡಲು ಪ್ರಾರಂಭಿಸುತ್ತವೆ.

**ನುಸಿ** : ಇದಕ್ಕೆ ಸಿಲ್ವರ್ ಫಿಷ್ ಅಥವಾ ಬೆಳ್ಳಿಮೀನು ಎಂಬ ಹೆಸರು ಹುಳುವಿನ ಬಣ್ಣ ಮತ್ತು ಆಕಾರದಿಂದಲೇ ಬಂದುದಾಗಿದೆ. ಸಮಶೀತೋಷ್ಣ ಹವಾಗುಣವು ಯಾವ ಕೀಟಗಳ ಬೆಳವಣಿಗೆಗೂ ಸಹಕಾರಿಯಾಗಿರುವುದಿಲ್ಲ. ಆದರೆ ಇಂತಹ ಹವಾಗುಣದಲ್ಲಿಯೂ ಈ ಹುಳುವನ್ನು ನಾವು ನೋಡಬಹುದು. ಇವು ಪುಸ್ತಕದ ರಟ್ಟುಕಟ್ಟುವಿಕೆಗೆ ಉಪಯೋಗಿಸುವ ಅಂಟು ಪದಾರ್ಥ ಗಳಿಂದಲೂ ಕಾಗದದ ನುಣುಪಿಗಾಗಿ ಉಪಯೋಗಿಸುವ ಜಿಲಟಿನ್ ಮತ್ತು ಪಿಷ್ಟ ಪದಾರ್ಥಗಳಿಂದಲೂ ಆಕರ್ಷಿತವಾಗುತ್ತವೆ.

ಬೆಳ್ಳಿ ಬೂದು ಮಿಶ್ರ ಬಣ್ಣದಿಂದ ಕೂಡಿದ ಈ ನುಸಿ ಹುಳುವು ಅರ್ಧ

ಅಂಗುಲಕ್ಕಿಂತ ಹೆಚ್ಚು ಉದ್ದವಾಗಿರುವುದಿಲ್ಲ. ಇದು ತನ್ನ ಎರಡೂ ತುದಿಗಳಲ್ಲಿ ಉದ್ದವಾಗಿ ಚೂಪಾಗಿರುವ ಸ್ಪರ್ಶಾಂಗಗಳನ್ನು ಹೊಂದಿದೆ. ಈ ಅಂಗಗಳಿಂದ ಗ್ರಂಥಗಳಿಗೆ ಹಾನಿಯುಂಟು ಮಾಡುತ್ತದೆ ; ಕಾಗದದಲ್ಲಿ ರಂಧ್ರವನ್ನು ಕೊರೆಯುತ್ತದೆ. ಇದು ರಾತ್ರಿ ವೇಳೆಯಲ್ಲಿ ತನ್ನ ಕೆಲಸವನ್ನು ಚುರುಕಾಗಿ ಮಾಡಿದರೂ ಕತ್ತಲು ಪ್ರದೇಶದಲ್ಲಿ ಹಗಲೂ ತನ್ನ ಕೆಲಸವನ್ನು ಮುಂದುವರಿಸುತ್ತದೆ. ಇವುಗಳನ್ನು ಗ್ರಂಥಾಲಯಗಳಲ್ಲಿಯೇ ಅಲ್ಲದೆ ಅಡಿಗೆ ಮನೆಗಳಲ್ಲಿಯೂ ಕಾಣಬಹುದು.

**ಜಿರಲೆ** : ಕಾರ್ಕ್ರೋಚ್ ಪದವನ್ನು ಒಟ್ಟು ಬ್ಲಾಟಿಡೆ ಕೀಟಗಳ ಗುಂಪಿಗೆ ಉಪಯೋಗಿಸುವುದು ಸಾಮಾನ್ಯವಾಗಿದೆ. ಈ ಜಾತಿಯಲ್ಲಿ ಅನೇಕ ವಿಧವಿದೆ. ಕಪ್ಪು ಜೀರುಂಡೆಯನ್ನೇ ಜಿರಲೆ ಎಂದು ಕರೆಯುವುದು ರೂಢಿಯಲ್ಲಿದೆ. ಇದಕ್ಕೆ ಗೋಡೆಯ ಸುಣ್ಣದಿಂದ ಹಿಡಿದು ಕಾಲಿನ ಬೂಟುಗಳವರೆಗೆ ಎಲ್ಲವೂ ಆಹಾರವಾಗಬಹುದು. ಇವು ಕಣ್ಣಿಗೆ ಕಾಣದಂತೆ ಸಂದು ಗೊಂದುಗಳಲ್ಲಿ ಆಶ್ರಯ ಪಡೆಯುತ್ತವೆ. ಇವುಗಳ ಹತ್ತಿಕೊಂಡಂತಿರುವ ಮೈ ಸುಲಭವಾಗಿ ಅಡಗಿಕೊಳ್ಳಲು ಸಹಾಯಕವಾಗಿದೆ. ಸಾಮಾನ್ಯವಾಗಿ ಕಕ್ಕಸುಗಳ ಮೂಲಕವೊ ಕೊಳಾಯಿಗಳ ಮೂಲಕವೊ ಕಟ್ಟಡದ ತಳಪದಿಯಿಂದಲೊ ಬಂದು ಗ್ರಂಥಾಲಯವನ್ನು ಸೇರುತ್ತವೆ. ಗಂಡು ಜಿರಲೆಗಳು ಪರದೆಯಿಲ್ಲದ ಕಿಟಕಿಗಳ ಮೂಲಕ ಹಾರಿ ಬರುವುದೂ ಉಂಟು. ಕತ್ತಲಾಗುತ್ತಿದ್ದಂತೆಯೆ ತಾವು ಅಡಗಿದ್ದ ಸ್ಥಳದಿಂದ ಹೊರಬಂದು ತಮ್ಮ ಆಡಳಿತವನ್ನು ಆರಂಭಿಸುತ್ತವೆ.

ಜಿರಲೆಗಳನ್ನು ಗ್ರಂಥಗಳ ಶತ್ರುಗಳೆಂದು ೧೬೦೨ರಲ್ಲಿಯೇ ಯೂಲಿಸಿಸ್ ಆಲ್ಡ್ರೊವಾಂಡಸ್ ಎಂಬಾತನು ಹೇಳಿದ್ದಾನೆ. ೧೭೫೪ ರಲ್ಲಿ ಬಹಮ ದ್ವೀಪಗಳಲ್ಲಿ ಇವುಗಳನ್ನು ಉಪದ್ರವ ಜೀವಿಗಳೆಂದು ಕರೆದಿದ್ದಾರೆ. ೧೮೩೭ ರಲ್ಲಿ ವೆಸ್ಟ್ ಇಂಡೀಸ್ ದೇಶದಲ್ಲಿ ಜಿರಲೆಗಳು ಹೆಚ್ಚು ಸಂಖ್ಯೆಯಲ್ಲಿದ್ದು ಅನೇಕ ಗ್ರಂಥಗಳನ್ನು ನಾಶಮಾಡಿದುದಲ್ಲದೆ ರೋಗಿಗಳನ್ನೂ ಸತ್ತವರನ್ನೂ ಮುತ್ತಿದ್ದುವು ಎಂದು ತಿಳಿಸಿದ್ದಾರೆ.

**ಗ್ರಂಥಹುಳು** (Book-Worm) : ಈ ಹುಳು ಪುಸ್ತಕದಲ್ಲಿಯೇ ಹುಟ್ಟಿ ಅಲ್ಲಿಯೇ ಬದುಕುವುದರಿಂದ ಪುಸ್ತಕಕ್ರಿಮಿ ಅಥವಾ ಬುಕ್ ವರ್ಮ್ ಎಂಬ

ಹೆಸರು ಅನ್ವರ್ಥವಾಗಿ ಬಂದಿದೆ. ಪುಸ್ತಕ ಕ್ರಿಮಿ ಎಂದಾಗ ಪಲವರು ಪುಸ್ತಕ ಗಳಲ್ಲಿ ಕಂಡು ಬರುವ ಎಲ್ಲ ಹುಳುಗಳಿಗೂ ಈ ಹೆಸರು ಇರಬಹುದೆಂದು ಭಾವಿಸುತ್ತಾರೆ. ಆದರೆ ಗ್ರಂಥಗಳಲ್ಲಿ ಕಂಡುಬರುವ ಎಲ್ಲ ಹುಳುಗಳಿಗೂ ಈ ಹೆಸರಿಲ್ಲ ; ಅವುಗಳಲ್ಲಿ ಇದೂ ಒಂದಾಗಿದೆ.

ಈ ಹುಳುಗಳು ಓಲೆ ಕಾಗದ ಎರಡರಲ್ಲಿಯೂ ಕಂಡು ಬರುತ್ತವೆ. ಇವು ಹಾಳೆಗಳು ಅಥವಾ ಪತ್ರಗಳಲ್ಲಿ ರಂಧ್ರಗಳನ್ನು ಕೊರೆದು ಗಂಥಗಳನ್ನು ಹಾಳು ಮಾಡುತ್ತವೆ. ಇವು ಹೆಚ್ಚುಕಾಲ ಗ್ರಂಥದಲ್ಲಿಯೇ ನಿಂತರೆ ಓಲೆ ಗ್ರಂಥಗಳಾದಿ ಯಾಗಿ ಎಲ್ಲವೂ ಮುಟ್ಟಿದರೆ ಪುಡಿಯಾಗುವಂತಹ ಸ್ಥಿತಿಯನ್ನು ಮುಟ್ಟುತ್ತವೆ. ಕೆಲವು ಹಸ್ತಪ್ರತಿಗಳಲ್ಲಿ ಕೊರೆದಿರುವ ಸೂರಾರು ನೇರವಾದ ಮತ್ತು ಚಿತ್ರ ವಿಚಿತ್ರವಾದ ರಂಧ್ರಗಳನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವುಂಟಾಗು ವುದು ಸಹಜವಾಗಿದೆ. ಇವು ಕೊರೆದಿರುವ ಭಾಗಗಳಲ್ಲಿ ಕೆಲವು ಕೊರೆತಗಳು ಯಾವುವೋ ಅಕ್ಷರಭ್ರಾಂತಿಯನ್ನುಂಟುಮಾಡುತ್ತವೆ. ಆದುದರಿಂದಲೇ 'ಘುಣಾಕ್ಷರ ಪ್ರಾಯ' ಎಂಬ ಪದವೇ ರೂಢಿಗೆ ಬಂದಿದೆ. ಇಷ್ಟು ಸಣ್ಣ ಹುಳು ಇಷ್ಟು ತೀವ್ರ ಹಾನಿಯನ್ನು ಮಾಡಬಲ್ಲುದೇ ಎಂಬ ಸಂದೇಹ ಮೂಡುತ್ತದೆ.

ಇವು ಗ್ರಂಥ ಹುಟ್ಟಿದಾಗಿನಿಂದಲೂ ಇದ್ದೇ ಇವೆ. ಈಜಿಪ್ಟ್ ದೇಶದಲ್ಲಿ ಪಪೈರಿಗೂ ಭಾರತದಲ್ಲಿ ಓಲೆಗಳಿಗೂ ಹಾನಿಯನ್ನುಂಟುಮಾಡಿವೆ. ಈಗಲೂ ಎಲ್ಲ ವಿಧವಾದ ಗ್ರಂಥಗಳಿಗೂ ಕೆಡುಕನ್ನುಂಟುಮಾಡುತ್ತವೆ. ಇವು ಸಮಶೀತೋಷ್ಣ ವಲಯದಲ್ಲಿ ಅಲ್ಪವಾಗಿದ್ದರೂ ಉಷ್ಣವಲಯ ಮತ್ತು ಅದರ ಪರಿಸರ ಪ್ರದೇಶ ಗಳಲ್ಲಿ ಹೆಚ್ಚಾಗಿವೆ. ಅರಿಸ್ಟಾಟಲ್ ತತ್ವಜ್ಞಾನಿಯು ಇದನ್ನು 'ಉಪದ್ರವಕಾರಿ' ಎಂದು ಕರೆದಿದ್ದಾನೆ. ಡಾ. ಪಿ. ಬ್ರೂಕ್ಸ್ ಎಂಬಾತನು ತನ್ನ ಲೇಖನದಲ್ಲಿ "ಪುಸ್ತಕಗಳಿಗೆ ಕಾಲ ಗಾಳಿ ಹವಾಮಾನ ಬೆಂಕಿ ಮತ್ತು ಪ್ರವಾಹಗಳಿಂದ ಆಗುವ ಅನಾಹುತವನ್ನು ಈ ಪುಸ್ತಕಕ್ರಿಮಿಯಿಂದ ಆಗುವ ಅನಾಹುತಕ್ಕೆ ಹೋಲಿಸಿದರೆ ಮೊದಲನೆಯದರಿಂದ ಆಗುವ ಹಾನಿ ಅತ್ಯಲ್ಪವೆಂದೇ ಹೇಳಬೇಕಾಗುತ್ತದೆ"[1] ಎಂದಿದ್ದಾನೆ.

1. New-York Times : Book Review Section Jan. 1933

**ಗೆದ್ದಲು :** ಇವುಗಳಲ್ಲಿ ೧೮೬೧ ಪ್ರಭೇದಗಳಿವೆ ಎಂದು ತಿಳಿದುಬರುತ್ತದೆ. ಇದರಿಂದ ವಿಶ್ವದ ಹಲವಡೆ ತೊಂದರೆಗಳಾಗಿವೆ. ಹುಲ್ಲು ಕಸಕಡ್ಡಿ ಒಣಗಿದ ಗಿಡಗಳು ಮತ್ತು ಮರ, ಕಟ್ಟಡಗಳಿಗೆ ಮರಮುಟ್ಟುಗಳು, ಗ್ರಂಥಗಳು, ಕಾಗದ ಪತ್ರಗಳು ಎಲ್ಲವೂ ಇದಕ್ಕೆ ಆಹಾರವೆ. ಇವುಗಳು ಒಂದು ಗ್ರಂಥಾಲಯವನ್ನು ಸೇರಿದರೆ ಒಂದು ರಾತ್ರಿಯಲ್ಲಿ ಮತ್ತೆ ತುಂಬಲಾರದಂತಹ ನಷ್ಟವನ್ನುಂಟು ಮಾಡಬಹುದು. ಯಾವುದಾದರೂ ಗ್ರಂಥಾಲಯಕ್ಕೆ ಗೆದ್ದಲು ಬರುವ ಸಾಧ್ಯತೆ ಯಿದ್ದರೆ ಅದನ್ನು ನಿತ್ಯವೂ ಪರೀಕ್ಷಿಸಿ ಎಚ್ಚರಿಕೆ ವಹಿಸುವುದು ಅತ್ಯವಶ್ಯಕ ಮರದ ಕಪಾಟುಗಳನ್ನು ಗೋಡೆಗೆ ಒರಗಿಸಿಡುವುದನ್ನು ಆದಷ್ಟು ಮಟ್ಟಿಗೆ ಬಿಡುವುದು ಉಚಿತವಾಗಿದೆ.

**ಫೈರ್‌ಬ್ರ್ಯಾಟ್ಸ್** (firebrats] : ಇವು ನುಸಿ ಹುಳುಗಳನ್ನೇ ಹೋಲುತ್ತವೆ. ಇವುಗಳನ್ನು ಗ್ರಂಥಾಲಯಗಳಲ್ಲಿ ಕಾಣುವುದು ಅಪರೂಪ.

**ಸೋಸಿಡ್ಸ್** (psocids) : ಈ ಹುಳುಗಳನ್ನು ಸಾಮಾನ್ಯವಾಗಿ ಬುಕ್ ಲೈಸ್ ಎಂದು ಕರೆಯುತ್ತಾರೆ. ಇವು ಬೂದು ಇಲ್ಲವೆ ನಸುಹಳದಿ ಬಣ್ಣ ವುಳ್ಳುವಾಗಿವೆ. ಇವುಗಳಿಗೆ ಮೃದುವಾದ ಮೈಯೂ ಚೆನ್ನಾಗಿ ಬೆಳೆದ ದವಡೆ ಗಳೂ ಇವೆ. ಬೆಳೆದ ದವಡೆಗಳಿರುವುದರಿಂದ ಅಗಿಯಲು ಅನುಕೂಲವಾಗಿರು ತ್ತದೆ. ಈ ಹುಳುಗಳು ಹೆಚ್ಚಾಗಿ ಶೀತವೇರಿದ, ಉಪಯೋಗಿಸದೆ ಇರುವ ಹಳೆಯ ಗ್ರಂಥಗಳಲ್ಲಿರುತ್ತವೆ. ಇವು ಪುಸ್ತಕದ ರಟ್ಟಿನ ಭಾಗವನ್ನೂ ಅದಕ್ಕೆ ಉಪಯೋಗಿಸಿದ ಅಂಟನ್ನೂ ತಿಂದು ಪುಸ್ತಕವನ್ನು ಹಾಳುಮಾಡುತ್ತವೆ. ಕಾಗದದ ಹಸ್ತಪ್ರತಿಗಳಿಗೆ ಇವುಗಳಿಂದ ಅಪಾಯವಾಗಬಹುದಾದರೂ ಓಲೆ ಗ್ರಂಥಗಳಿಗೆ ಇದರ ಉಪಟಳ ಇಲ್ಲವೆಂದೇ ಹೇಳಬಹುದು.

ಇದೇ ಅಲ್ಲದೆ ಕಂದುಬಣ್ಣದ ಹಾರುಕೀಟ, ಮಣ್ಣಿನ ಕಣಜಗಳು, ಗ್ರಂಥ ಚೇಳುಗಳಿಂದ ಅಲ್ಪ ಸ್ವಲ್ಪ ನಷ್ಟ ಸಂಭವಿಸಬಹುದಾದರೂ ಇವುಗಳಿಂದ ಸುಲಭ ವಾಗಿ ಗ್ರಂಥ ಸಂರಕ್ಷಣೆ ಮಾಡಬಹುದು.

**ಬೂಷ್ಟು :** ಕ್ರಿಮಿಕೀಟಗಳಲ್ಲದೆ ಸಸ್ಯವರ್ಗಕ್ಕೆ ಸೇರಿದ ಬೂಷ್ಟಿನಿಂದ ಹಸ್ತ

ಪ್ರತಿಗಳಿಗೆ ಸಾಕಷ್ಟು ಹಾನಿ ಆಗುವುದು ಸಂಭವನೀಯ. ತೇವಾಂಶದಿಂದ ಉತ್ಪತ್ತಿಯಾಗುವ ಈ ಬೂಷ್ಟಿನ ಬೆಳವಣಿಗೆ ಅತಿ ಹೆಚ್ಚಾಗಿರುತ್ತದೆ. ಇದು ಒಂದು ಗ್ರಂಥಕ್ಕೆ ಬಂದರೆ ಉಳಿದವಕ್ಕೂ ಹರಡುವುದು ಸಾಮಾನ್ಯ. ಆದುದರಿಂದ ಬೂಷ್ಟು ಬರುವುದನ್ನು ಎಚ್ಚರಿಕೆಯಿಂದ ಗಮನಿಸುತ್ತಿದ್ದು ಬಂದಕೂಡಲೇ ಅವುಗಳನ್ನು ಬೇರ್ಪಡಿಸಿ ಆಗತ್ಯವಾದ ಉಪಚಾರ ಮಾಡುವುದು ಮತ್ತು ಉಳಿದವುಗಳಿಗೆ ಹರಡದಂತೆ ನೋಡಿಕೊಳ್ಳುವುದು ಅತ್ಯವಶ್ಯಕ.



# ನಿವಾರಣೋಪಾಯಗಳು

ಹುಳು ಹುಪ್ಪಟೆಗಳೇ ಮೊದಲಾದುವುಗಳಿಂದ ಆಗುವ ಅಪಾಯಗಳಿಂದ ಸ್ತಪ್ರತಿಗಳನ್ನು ರಕ್ಷಿಸಲು ವಿವಿಧ ರೀತಿಯ ಕಾರ್ಯಕ್ರಮಗಳನ್ನು ಕೈಗೊಳ್ಳ ೕಕಾಗುತ್ತದೆ. ಕೋಶಾಗಾರಕ್ಕೆ ಬಂದ ಹಸ್ತಪ್ರತಿಗಳನ್ನು ಪ್ರಧೂಮನ ಉಪಚಾರಕ್ಕೆ ಒಳಪಡಿಸಬೇಕು. ಇದರಿಂದ ಅವುಗಳಲ್ಲಿ ಸೇರಿರಬಹುದಾದ ಹುಳು ುಪ್ಪಟೆಗಳು ನಾಶವಾಗುತ್ತವೆ. ಅನಂತರ ಅವುಗಳನ್ನು ಶುದ್ಧೀಕರಿಸಿ ಧೂಳು ುತ್ತು ಇತರ ಅಶುದ್ಧ ಪದಾರ್ಥಗಳಿಂದ ಮುಕ್ತಗೊಳಿಸಬಹುದು. ಹೀಗೆ ದ್ಧವಾದ ಹಸ್ತ ಪ್ರತಿಗಳನ್ನು ಕೋಶಾಗಾರಕ್ಕೆ ಸೇರಿಸುವುದು ಅವುಗಳ ುರಸ್ತು ಕಾರ್ಯ ಕೈಗೊಳ್ಳುವುದು ಅತ್ಯವಶ್ಯಕ.

ಓಲೆ ಗ್ರಂಥಗಳ ಕಟ್ಟುಗಳಿಗೆ ಎರಡು ಕಡೆಯೂ ಮರದ ಪಟ್ಟಿಗಳನ್ನು ಕಿ ರಂಧ್ರದಿಂದ ದಾರವನ್ನು ಪೋಣಿಸಿ ಕಟ್ಟಿಡುವುದು ಸಾಮಾನ್ಯ. ಇವುಗಳನ್ನು ೋಡಿಸುವಾಗ ಹಲಗೆಯ ಒಂದು ಕಡೆ ಪಟ್ಟಿಯು ಕಪಾಟಿನ ಕೆಳಗಣ ಲಗೆಯ ಮೇಲೂ, ಮತ್ತೊಂದು ಭಾಗದ ಪಟ್ಟಿಯು ಮೇಲ್ಭಾಗಕ್ಕೂ ರುವಂತೆ ಜೋಡಿಸಿಡಬೇಕು. ಒಂದು ಕಟ್ಟಿಗೂ ಮತ್ತೊಂದು ಕಟ್ಟಿಗೂ ಸ್ವಲ್ಪ ಳವನ್ನು ಬಿಡಬೇಕು. ಇಲ್ಲದಿದ್ದಲ್ಲಿ ಪತ್ರಗಳ ಅಂಚುಗಳು ಮುರಿಯುವ ಸಂಭವ ದೆ. ಕೆಲವು ಕೋಶಾಗಾರಗಳಲ್ಲಿ ಈ ಕಟ್ಟುಗಳನ್ನು ಅವುಗಳ ಅಳತೆಗೆ ತಕ್ಕಂತೆ ಾಡಿಸಿದ ಮರದ ಪೆಟ್ಟಿಗೆಗಳಲ್ಲಿ ಇಟ್ಟಿರುವುದು ಕಂಡು ಬರುತ್ತದೆ. ಕಾಗದದ ಸ್ತಪ್ರತಿಗಳನ್ನು ಅವುಗಳ ಅವಶ್ಯಕತೆಗೆ ತಕ್ಕಂತೆ ಅವುಗಳಲ್ಲಿ ಸೇರಿರುವ ಆಮ್ಲ ಳನ್ನು ಹೋಗಲಾಡಿಸಿ ದುರಸ್ತಿ ಕಾರ್ಯವನ್ನು ಮಾಡಬೇಕಾಗುತ್ತದೆ.

ಇಂತಹ ಸಾಮಾನ್ಯ ರೀತಿಯ ರಕ್ಷಣೋಪಾಯಗಳಲ್ಲದೆ ಹಸ್ತಪ್ರತಿಗಳಿಗೆ ದಗುವ ವಿವಿಧ ರೀತಿಯ ಅಪಾಯಗಳಿಗೆ ತಕ್ಕಂತಹ ವಿಶೇಷ ನಿವಾರಣೋಪಾಯ ಳನ್ನು ಎಲ್ಲ ಹಸ್ತಪ್ರತಿ ಭಾಂಡಾರಿಗಳೂ ಕೈಗೊಳ್ಳಬೇಕಾಗುತ್ತದೆ.

**ಗೆದ್ದಲು :** ಹಸ್ತಪ್ರತಿಗಳನ್ನಿಡುವ ಕಟ್ಟಡವನ್ನು ಕಟ್ಟುವಾಗಲೇ ಗೆದ್ದಲಿನಿಂದ ರಕ್ಷಣೆಯನ್ನು ಪಡೆಯುವ ಮುಂಜಾಗರೂಕತೆಯನ್ನು ವಹಿಸಬಹುದು. ಕಟ್ಟಡದ ತಳಭಾಗದಲ್ಲಿ ಗೆದ್ದಲನ್ನು ತಡೆಗಟ್ಟುವ ಅನೇಕ ವಿಧ ವಿಷಪದಾರ್ಥಗಳನ್ನು ಉಪಯೋಗಿಸಿದರೂ, ಈಚೆಗೆ ಡೈಲ್ಡ್ರಿನ್ ಎಂಬ ವಸ್ತುವನ್ನು ಉಪಯೋಗಿಸುವುದು ಸಾಮಾನ್ಯವಾಗಿದೆ. ಈ ಡೈಲ್ಡ್ರಿನ್ ತಯಾರಕರು ತಾವು ಕ್ಲುಪ್ತಪ್ರಮಾಣದಲ್ಲಿ ಒದಗಿಸುವ ಈ ದ್ರಾವಣದ ಶೇಕಡ ೩೦ ರಷ್ಟು ಭಾಗವನ್ನು ಒಂದು ಗ್ಯಾಲನ್ ನೀರಿನೊಡನೆ ಬೆರಸಿ ತರುವಾಯ ಆ ದ್ರಾವಣಕ್ಕೆ ೮೦–೧೦೦ ಗ್ಯಾಲನ್ ನೀರನ್ನು ಬೆರಸಿ ಕಟ್ಟಡ ನಿವೇಶನದ ತಳಪಾಯಕ್ಕೆ ಸಿಂಪಡಿಸಬೇಕೆಂದು ಸೂಚಿಸುತ್ತಾರೆ. ಈಗಾಗಲೆ ಕಟ್ಟಿದ ಕಟ್ಟಡಗಳಿಗೆ ದ್ರಾವಣವನ್ನು ಹೊರಗಣ ಗೋಡೆಗಳ ಸಂದುಗಳಲ್ಲಿಯೂ, ನೆಲದಲ್ಲಿರುವ ಗುಳಿಗಳ ಮೂಲಕವೂ ಉಪಯೋಗಿಸಿದರೆ ಉತ್ತಮ. ಈ ದ್ರಾವಣವನ್ನು ಮರದ ಕಿಟಕಿ ಮತ್ತು ಬಾಗಿಲುಗಳ ಮೇಲೆಯೂ, ಅವು ಜೋಡಣೆಯಾಗಿರುವ ಗೋಡೆಗಳ ಅಂಚಿನ ಮೇಲೆಯೂ ಸಿಂಪಡಿಸಬಹುದು.

**ಬೂಷ್ಟು :** ಇದು ಹೆಚ್ಚು ತೇವಾಂಶದಿಂದ ಬರುವುದಾದುದರಿಂದ ಹವಾನಿಯಂತ್ರಣ ಉತ್ತಮ ವಿಧಾನವೆಂದು ಪರಿಗಣಿಸಲಾಗಿದೆ. ಹವಾನಿಯಂತ್ರಣ ಇಲ್ಲದೆಡೆಗಳಲ್ಲಿ ಚೆನ್ನಾಗಿ ಗಾಳಿ ಬೆಳಕು ಬರುವಂತೆ ವ್ಯವಸ್ಥೆ ಮಾಡಬೇಕು ಗ್ರಂಥಗಳಿರುವ ಕಪಾಟುಗಳಿಗೆ ಅರಗಿನಿಂದ ತಯಾರಿಸಿದ ಮೆರುಗೆಣ್ಣೆಯನ್ನು ಸಿಂಪಡಿಸುವುದು ಉತ್ತಮ. ಇದು ಬೂಷ್ಟು ಬರದಂತೆ ಮಾಡುವುದಲ್ಲದೆ ಹರಡುವುದನ್ನೂ ತಡೆಗಟ್ಟುತ್ತದೆ. ಹಸ್ತಪ್ರತಿಗಳನ್ನು ಕಪ್ಪು ಗಾಢ ನೀಲಿ ಮತ್ತು ಕೆಂಪು ಬಟ್ಟೆಗಳಿಂದ ಕಟ್ಟಿಟ್ಟರೆ ಬೂಷ್ಟು ಸುಲಭವಾಗಿ ಬರುವುದಿಲ್ಲ ; ಹಸುರು ಹಳದಿ ಬಣ್ಣಗಳಿಗೆ ಈ ನಿರೋಧಶಕ್ತಿ ಇಲ್ಲವೆಂದು ತಿಳಿದು ಬರುತ್ತದೆ.

**ಪ್ರಧೂಮನ ಉಪಚಾರ** (Fumigation Treatment) ರಾಸಾಯನಿಕ ವಸ್ತುಗಳ ಹಬೆ ಅಥವಾ ಧೂಪದಿಂದ ಹಸ್ತಪ್ರತಿಗಳಿಗೆ ಬಂದ ಕ್ರಿಮಿ ಕೀಟಗಳು, ಬೂಷ್ಟು ಮೊದಲಾದುವನ್ನು ನಾಶ ಮಾಡಬಹುದು. ಹೊರಗಣಿಂದ ಬಂದ ಹಸ್ತಪ್ರತಿಗಳನ್ನು ಇದಕ್ಕೆ ಒಳಪಡಿಸಿದಾಗ ಅವುಗಳಲ್ಲಿರಬಹುದಾದ

ಳುಗಳೂ, ಅವುಗಳ ಮೊಟ್ಟೆಗಳೂ ಸಹ ನಾಶವಾಗಿ ಕ್ರಿಮಿಕೀಟಗಳು ಕೋಶಾ
ರವನ್ನು ಸೇರಲು ಸಾಧ್ಯವಾಗುವುದಿಲ್ಲ. ಒಟ್ಟು ಕೋಶಾಗಾರವನ್ನೇ ಈ
ತ್ತಡಕ್ಕೆ ಒಳಪಡಿಸಿ ಕೆಲವು ದಿನಗಳವರೆಗೆ ತೆರೆಯದಿರುವುದು ಸೂಕ್ತ, ಇದಕ್ಕೆ
ಡ್ರೊಜನ್ ಸೈನೆಡ್, ಕಾರ್ಬನ್ ಡೈಸಲ್ಫೈಡ್ ಅಥವಾ ಮೆಥಿಲ್
ರ್ರೊಮೈಡ್ ಉಪಯೋಗಿಸಬಹುದು. ಕೆಲವು ಹಸ್ತಪ್ರತಿಗಳು ಮಾತ್ರ ಕೀಟಗಳ
ಧೆಗೆ ತುತ್ತಾದಾಗ ಅವುಗಳನ್ನು ಬೇರೆ ತೆಗೆದು ವಾಯುರೇಚಕನ ಹಬೆಯು
ತ್ತಡದಲ್ಲಿಟ್ಟು ಕೀಟಗಳನ್ನು ನಾಶಪಡಿಸಬಹುದು.

ವಾಯು ಶೂನ್ಯವಾದ ಕೊಠಡಿಯಲ್ಲಿ ಅಥವಾ ಕಪಾಟಿನಲ್ಲಿ ಹಸ್ತಪ್ರತಿ
ನ್ನಿಟ್ಟು ಕ್ರಿಮಿನಾಶಕ ರಾಸಾಯನಿಕ ವಸ್ತುಗಳ ಹಬೆಯ ಒತ್ತಡಕ್ಕೊಳಪಡಿಸ
ಬಹುದು. ಇದಕ್ಕೆ ಪ್ಯಾರ ಡೈಕ್ಲೊರೊಬೆಂಜಿನ್ ಗಟ್ಟಿಗಳನ್ನೊ ಅಥವಾ
ಕ್ಲೋರೈಡ್ ಮತ್ತು ಎಥಿಲಿನ್ ಡೈಕ್ಲೊರೈಡ್ ಮಿಶ್ರಿತ ಕಿಲ್ಲೊಪ್ಟೆರ
ದ್ರಾವಣವನ್ನೊ ಉಪಯೋಗಿಸಬಹುದು. ಕಿಲ್ಲೊಫ್ಟೆರ ಗಾಳಿಗಿಂತ ತೂಕವಾಗಿ
ರುವುದರಿಂದ ಅದನ್ನು ಕಪಾಟನ ಮೇಲ್ಭಾಗದ ಅರೆಯಲ್ಲಿ ಅಥವಾ ಪುಸ್ತಕದ
ಟ್ಟಲಿನಲ್ಲಿ ಇಡಬೇಕಾಗುತ್ತದೆ. ಉಳಿದವನ್ನು ಕಪಾಟಿನ ಕೆಳಗಣ ಹಂತದಲ್ಲಿಡ
ಬೇಕಾಗುತ್ತದೆ. ಹೀಗೆ ಇಡುವಾಗ ಕಪಾಟಿಗೆ ಅಳವಡಿಸಿದ ಉಕ್ಕಿನ ಬಟ್ಟಲಿನಲ್ಲಿ
ರಾಸಾಯನಿಕ ವಸ್ತುವನ್ನು ಹಾಕಿ ಅದು ವಿದ್ಯುಚ್ಛಕ್ತಿ ದೀಪದಿಂದ ಕಾಯುವಂತಿರ
ಬೇಕು. ನವದೆಹಲಿಯಲ್ಲಿರುವ ಭಾರತ ರಾಷ್ಟ್ರೀಯ ಪತ್ರಾಗಾರ ಥೈಮಾಲ್
ಧೂಮನವನ್ನೇ ಹೆಚ್ಚಾಗಿ ಬಳಸುತ್ತಿದೆ.

ನ್ಯಾಫ್ತಲಿನ್ ಬಿಲ್ಲೆಗಳನ್ನು ಕೋಶಾಗಾರದ ಕಪಾಟುಗಳಲ್ಲಿ ಅಲ್ಲಲ್ಲಿಯೇ
ಇಡುವುದರಿಂದಲೂ ಕೆಲಮಟ್ಟಿನ ರಕ್ಷಣೆ ದೊರೆಯುತ್ತದೆ. ಇದಲ್ಲದೆ ಪೈರಾತ್ರಮ್
ಪುಡಿಯನ್ನು ಉಪಯೋಗಿಸಬಹುದು. ಇದು ಮನುಷ್ಯರಿಗೆ ಅಪಾಯಕಾರಿ
ಯಾಗುವುದರಿಂದ ಬಹಳ ಜಾಗರೂಕತೆಯಿಂದ ಉಪಯೋಗಿಸಬೇಕು.
ಸೋಡಿಯಂ ಫ್ಲೋರೈಡನ್ನು ಗೋಧಿಯ ಹಿಟ್ಟಿನೊಡನೆ ೧೨ :೧೦೦ ಪ್ರಮಾಣದಲ್ಲಿ
ಬೆರೆಸಿ ಕಪಾಟುಗಳಲ್ಲಿ ಅಥವಾ ಕತ್ತಲೆ ಮೂಲೆಗಳಲ್ಲಿಟ್ಟರೆ ಜಿರಲೆಗಳನ್ನು ನಾಶ
ಪಡಿಸಬಹುದು. ಹೀಗೆ ಕ್ರಿಮಿಕೀಟಗಳನ್ನು ತಡೆಗಟ್ಟಲು ಭಾರತದಲ್ಲಿ ಹಲವಾರು
ಪ್ರಯತ್ನಗಳು ನಡೆದಿವೆ. ಕೆಲವೆಡೆ ಪಂಡ್ರಿ ಎಂಬ ಒಂದು ವಿಧವಾದ ಹುಲ್ಲು
ಮತ್ತು ಘೋರಬಾಚ್ (Ghora Bach : Achorus Calamus)

ಇವುಗಳ ಪುಡಿಯನ್ನು ಹಸ್ತಪ್ರತಿಗಳೊಡನೆ ಇಟ್ಟಿದ್ದುದು ಕಂಡು ಬರುತ್ತದೆ. ಈ ಪುಡಿಯಲ್ಲಿರುವ ಎಣ್ಣೆಯು ಕ್ರಿಮಿಕೀಟಗಳನ್ನು ದೂರವಿಡಲು ಸಹಾಯಕವಾಗು ವುದೆಂದು ತೋರುತ್ತದೆ.

**ಕೀಟನಾಶಕ ನೆರುಗೆಣ್ಣೆಗಳು :** ದೇವದಾರು ಎಣ್ಣೆಯೇ ಗ್ರಂಥಗಳಿಗೆ ಮೊದಲು ಉಪಯೋಗಿಸಿದ ಕೀಟನಾಶಕ ಎಣ್ಣೆಯಾಗಿದೆ. ಅನಂತರ ಮರ್ಕ್ಯುರಿಕ್ ಕ್ಲೋರೈಡ್, ಡೈಲ್ಡ್ರಿನ್ ಮತ್ತು ಯುರಿಯ ಫಾರ್ಮಲ್ ಡಿ ಹೈಡ್ ಮೊದಲಾದ ಎಣ್ಣೆಗಳು ಬಳಕೆಗೆ ಬಂದುವು.

ಪ್ರಪಂಚದ ಎಲ್ಲ ಕಡೆಯೂ ಜಿರಲೆಗಳ ಕಾಟವನ್ನು ಡೈಲ್ಡ್ರಿನ್‌ನಿಂದ ತಡೆಗಟ್ಟಬಹುದು. ಕೆಲವು ಕೀಟಗಳಿಗೆ ಡೈಲ್ಡ್ರಿನ್‌ಗೆ ಬದಲಾಗಿ ಡಿ.ಡಿ.ಟಿ. ಬೆಂಜಿನ್ ಹೆಕ್ಸಾಕ್ಲೋರೈಡ್, ಆಲ್ಡ್ರಿನ್ ಮತ್ತು ಇತ್ತೀಚಿನವುಗಳಾದ ಎಂಡ್ರಿನ್ ಐಸೊಡ್ರಿನ್–ಮೊದಲಾದ ಕ್ರಿಮಿನಾಶಕಗಳನ್ನು ಉಪಯೋಗಿಸುವುದು ಅವಶ್ಯಕ ಹೀಗೆ ಅವುಗಳನ್ನು ಉಪಯೋಗಿಸುವಾಗ ಕೀಟಗಳು ಬರಬಹುದಾದ ಕಡೆಗಳಲ್ಲಿ ಮತ್ತು ಅವು ಅಡಗಿಕೊಳ್ಳಬಹುದಾದ ಸ್ಥಳಗಳಲ್ಲಿ ಎಂದರೆ ನೆಲ ಮತ್ತು ಗೋಡೆಯ ಬಿರುಕುಗಳು, ಸಂದಿಗೊಂದಿಗಳು, ಕಪಾಟುಗಳ ಕೆಳಭಾಗ, ಕಿಟಕಿಯ ಅಂಚು ಪಟ್ಟಿಗಳು–ಮೊದಲಾದೆಡೆಗಳಲ್ಲಿ ಕುಂಚದಿಂದ ಸವರಬೇಕು ಇಲ್ಲವೆ ಪಿಚಕಾರಿಗಳಿಂದ ಸಿಂಪಡಿಸಬೇಕು. ಹೀಗೆ ಮಾಡುವುದರಿಂದ ಜಿರಲೆ ಬೆಳ್ಳಿಮೀನು ಗ್ರಂಥಹುಳುಗಳು ಮೊದಲಾದುವನ್ನು ತಡೆಗಟ್ಟಬಹುದು.

ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯ ಮತ್ತು ಕನ್ನಡ ಅಧ್ಯಯನ ಸಂಸ್ಥೆಗಳಲ್ಲಿ ತಾಳೆಗರಿಗಳಿಗೆ ಉಪಯೋಗಿಸುವ ಸ್ಥಳೀಯವಾಗಿ ತಯಾರಾಗುವ ಎಣ್ಣೆಯು ಗಿಡಮೂಲಿಕೆಗಳಿಂದ ತಯಾರಾದುದೆಂದು ಹೇಳುತ್ತಾರೆ. ಆದರೆ ಇದು ಹೇಗೆ ತಯಾರಾಗುತ್ತದೆಂಬ ವಿವರ ಇದುವರೆಗೆ ಬಹಿರಂಗವಾಗಿಲ್ಲ. ಈ ಎಣ್ಣೆ ಯಿಂದ ಓಲೆಗಳು ಮೃದುವಾಗುವುದಲ್ಲದೆ ಮಂಕಾದ ಅಕ್ಷರಗಳು ಸ್ಫುಟವಾಗಿ ಕಾಣುತ್ತವೆ. ಅಲ್ಲದೆ ಕ್ರಿಮಿಕೀಟಗಳು ತಾಳೆಗೆ ಸೇರದಂತೆ ಮಾಡುವುದರಲ್ಲಿಯೂ ಇದು ಪರಿಣಾಮಕಾರಿಯಾಗಿದೆ. ಆದರೆ ಈ ಎಣ್ಣೆಯನ್ನು ಉಪಯೋಗಿಸುವಾಗ ಬಹಳ ಎಚ್ಚರ ಅವಶ್ಯ. ಇದು ಸುಲಭವಾಗಿ ಬೂಷ್ಟನ್ನು ಬರಮಾಡಿಕೊಳ್ಳುವುದ ರಿಂದ, ಹದವರಿತು ಗರಿಯಲ್ಲಿ ಶೈತ್ಯಾಂಶ ನಿಲ್ಲದಂತೆ ಉಪಯೋಗಿಸಬೇಕು.

**ನಿಯಂತ್ರಣ :** ಕೀಟಗಳನ್ನು ತಡೆಗಟ್ಟುವುದರಲ್ಲಿ, ಹವಾಮಾನ
ರೀತ್ಯಗಳಿಂದ ಹಸ್ತಪ್ರತಿಗಳ ಸಂರಕ್ಷಣೆಯಲ್ಲಿ ಅತ್ಯಂತ ಪರಿಣಾಮಕಾರಿಯಾದ
ವೆಂದರೆ ಹವಾ ನಿಯಂತ್ರಣ. ಈ ಕ್ರಮವು ಒಂದು ಕಾಲಕ್ಕೆ ಭೋಗವೆಂದು
ಣಿತವಾಗಿದ್ದಿತು : ಆದರೆ ಗ್ರಂಥಪೌಲ್ಯದೊಡನೆ ಇದರ ವೆಚ್ಚವನ್ನು
ಲಿಸಿ ನೋಡಿದಾಗ ಇದು ಅತ್ಯಂತ ಅವಶ್ಯಕ ಕ್ರಮವೆಂದು ಹೇಳಬಹುದು.
ನಿಯಂತ್ರಣ ಸಾಧ್ಯವಿಲ್ಲದಾಗ ಸೀರನ್ನಾಗಲಿ ಕ್ಯಾಲ್ಸಿಯಂ ಕ್ಲೋರೈಡ
ಲಿ ಋತುಮಾನಕ್ಕೆ ತಕ್ಕಂತೆ ಉಪಯೋಗಿಸಿ ಹವಾನಿಯಂತ್ರಣವನ್ನು ಸ್ವಲ್ಪ
ಗೆ ಸಾಧಿಸಬಹುದಾದರೂ, ಇದರಿಂದ ಗಾಳಿಯ ಶುದ್ಧತೆಯನ್ನು ಕಾಪಾಡಲು
ವಾಗುವುದಿಲ್ಲ. ಇವೇ ಅಲ್ಲದೆ ಮತ್ತೂ ಸುಲಭವಾಗಿ ಮಾಡಬಹುದಾದ
ವೆಂದರೆ ಹಸ್ತಪ್ರತಿಗಳಿಗೆ ಧೂಳು ಸೇರದಂತೆ ನೋಡಿಕೊಳ್ಳುವುದು. ತಿಂಗಳಿ
ಮ್ಮೆಯಾದರೂ ಇವುಗಳನ್ನು ಶುದ್ಧೀಕರಿಸಿದರೆ ಇದರಿಂದ ಬಹುಮಟ್ಟಿನ
ಸಾಧ್ಯವಾಗುತ್ತದೆ. ಜೊತೆಗೆ ಸುಂಡ ಇಲಿ ಹೆಗ್ಗಣಗಳು ಕೋಶಾಗಾರವನ್ನು
ದಂತೆ ನೋಡಿಕೊಳ್ಳುವುದು ಅವಶ್ಯಕ.

**ಸ್ತಿ ಕಾರ್ಯ :** ಶೇಖರವಾಗಿರುವ ಹಸ್ತಪ್ರತಿಗಳ ರಕ್ಷಣೆಯ ಜೊತೆಗೆ
ಹೋಗಿರುವವನ್ನು ಜೀರ್ಣೋದ್ಧಾರ ಮಾಡುವುದೂ ಮುಖ್ಯ ಕರ್ತವ್ಯ
ದೆ. ಕಾಗದದ ಹಸ್ತಪ್ರತಿಗಳಾಗಿದ್ದರೆ ಅವುಗಳಲ್ಲಿ ಮಡಿಸಿಕೊಂಡಿರ
ದಾದ ಹಾಳೆಗಳನ್ನು ಬಿಚ್ಚಿ ಒತ್ತು ಕಾಗದದೊಳಗಿಟ್ಟು ಒದ್ದೆಯ ಸ್ಪಂಜಿನ
ಯದಿಂದ ತೇವ ಮಾಡಬೇಕು. ಅನಂತರ ಒತ್ತುಕಾಗದದ ಮಡಿಕೆಯೊಳ
ಇಸ್ತ್ರಿಪೆಟ್ಟಿಗೆಯ ಸಹಾಯದಿಂದ ತಕ್ಕಷ್ಟು ಶಾಖದಿಂದ ಇಸ್ತ್ರಿ ಮಾಡಬೇಕು.
ಅದರ ಮಡಿಕೆಯು ಅಳಿದು ನೇರವಾಗುತ್ತದೆ.

ಹಾಗೆಯೆ ಬಿಡಿ ಹಾಳೆಗಳು ಮತ್ತು ನಶಿಸಿದ ಹಾಳೆಗಳ ದುರಸ್ತು ಕಾರ್ಯ
ಕೆಲವು ನಿಯಮಗಳೊಡನೆ ಕೈಗೊಳ್ಳಬೇಕು. ಅದರಲ್ಲಿರುವ ಯಾವ
ವೂ ಅಳಿಸಿಹೋಗದಂತೆ ಎಚ್ಚರಿಕೆ ವಹಿಸಬೇಕು. ಇದಕ್ಕೆ ಉಪಯೋಗಿಸುವ
ದ ಕೈಯಿಂದ ಮಾಡಿದುದಾಗಿರಬೇಕು (Hand Made Paper) :
ಅಂಟು ಮೊದಲಾದುವುಗಳ ಗುಣಮಟ್ಟ ಚೆನ್ನಾಗಿರಬೇಕು. ಟಿಸ್ಯೂ
ಸ್ ಮೊದಲಾದುವನ್ನೂ ಉಪಯೋಗಿಸಿ ಈ ಕಾರ್ಯ ಮಾಡಬಹುದು.

ಅಮೂಲ್ಯವಾದ ದಾಖಲೆ ಪತ್ರಗಳನ್ನೂ ಹಸ್ತಪ್ರತಿಗಳನ್ನೂ ದುರಸ್ತು ಪಡಿಸುವುದರಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಯಶಸ್ಸುಗಳಿಸಿರುವ ವಿಧಾನವೆಂದರೆ ಲ್ಯಾಮಿನೇಶನ್ ರಿಪೇರಿ ಕ್ರಮ. ಭದ್ರಪಡಿಸಬೇಕಾದ ಹಾಳೆಗಳ ಎರಡು ಕಡೆಯೂ ಅಸಿಟೇಟ್ ತೆಳುಹಾಳೆಗಳನ್ನು ಹೊದಿಸುತ್ತಾರೆ. ಇದಕ್ಕಾಗಿಯೇ ಒಂದು ಪ್ರೋಟೋರೀತಿಯ ಹೈಡ್ರಾಲಿಕ್ ಪ್ರೆಸ್ಸೊಂದನ್ನು ನಿರ್ಮಿಸಿದ್ದಾರೆ. ಈ ವಿಧಾನ ದಲ್ಲಿ ಹೊದಿಸಿದ ತೆಳುಹಾಳೆ ಮೂಲಹಾಳೆಯೊಡನೆ ಸೇರಿಕೊಂಡು ಅದರ ಶಕ್ತಿ ಯನ್ನು ಹೆಚ್ಚಿಸುತ್ತದೆ. ಯಂತ್ರದ ಮೂಲಕ ಮಾಡುವ ಲ್ಯಾಮಿನೇಶನ್ ಅಲ್ಲದೆ ಕೈಯಿಂದಲೂ ಇದನ್ನು ಮಾಡಬಹುದಾಗಿದೆ.

ಓಲೆಗರಿ ಮತ್ತು ಭೂರ್ಜಪತ್ರಗಳ ಮಸಿ ಅಳಿಸದಂತಿದ್ದರೆ ಪ್ರತಿ ಎಲೆಯನ್ನೂ ಗ್ಲಿಸರಿನ್ ಮತ್ತು ನೀರನ್ನು ೧ : ೧ ಪ್ರಮಾಣದಲ್ಲಿ ಸೇರಿಸಿ ಅದರಿಂದ ಶುದ್ಧಗೊಳಿಸಬಹುದು. ಮಸಿಯು ಅಳಿಸುವಂತಿದ್ದರೆ ಕಾರ್ಬನ್ ಟೆಟ್ರಕ್ಲೋರೈಡ್ ಅಥವಾ ಅಸಿಟೋನ್ ಹಾಳೆಗಳಿಂದ ಸ್ವಚ್ಛಗೊಳಿಸಬೇಕು. ಕಂಠದಿಂದ ಅಕ್ಷರಗಳನ್ನು ಕೊರೆದಿರುವ ಓಲೆಗಳಿಗೆ ಗ್ರಾಫೈಟ್ ಪುಡಿಯನ್ನು ಹಚ್ಚಿ ಅಕ್ಷರಗಳು ಚೆನ್ನಾಗಿ ಕಾಣುವಂತೆ ಮಾಡಬಹುದು. ಕೆಲವು ಸಲ ಶೀತದಿಂದಲೊ ಅಥವಾ ಮತ್ತಾವ ಕಾರಣದಿಂದಲೊ ಓಲೆಗಳು ಒಂದಕ್ಕೊಂದಕ್ಕೆ ಅಂಟಿಕೊಂಡಿರು ತ್ತವೆ. ಇವುಗಳನ್ನು ಪ್ಯಾರಫಿನ್ ದ್ರಾವಣದಲ್ಲಿ ನೆನೆಯಿಸಿ ಬಿಡಿಸಲು ಪ್ರಯತ್ನಿಸ ಬೇಕು. ಪತ್ರಗಳು ಮುರಿದು ತುಂಡಾಗಿದ್ದರೆ ಅಥವಾ ಅವುಗಳ ಯಾವುದೇ ಭಾಗ ಹರಿದಿದ್ದರೆ ಆ ಭಾಗಕ್ಕೆ ಕ್ವಿಕ್‌ಫಿಕ್ಸ್ ಮೊದಲಾದ ಅಂಟುಗಳನ್ನು ಉಪ ಯೋಗಿಸಿ ಸರಿಪಡಿಸಬಹುದು. ಅನಂತರ ಅವುಗಳ ಮೇಲೆ ಟಿಸ್ಯೂ ಕಾಗದವನ್ನೊ ಚಿಫನ್ ಬಟ್ಟೆಯನ್ನೊ ಕಾರ್ಬಾಕ್ಸಿ ಮಿಥಿಲ್ ಸೆಲ್ಯುಲೋಸ್ ಎಂಬ ಅಂಟಿನ ಸಹಾಯದಿಂದ ಹೊದಿಸಬಹುದು. ಹೀಗೆ ಹೊದಿಸುವಾಗ ಪತ್ರದ ಒಂದು ಮಗ್ಗುಲಲ್ಲಿ ಹೊದಿಸಿದುದನ್ನು ಮತ್ತೊಂದು ಮಗ್ಗುಲಿಗೆ ಮುಂದುವರಿಸಿ ಮೊದಲ ಪುಟದ ಕೊನೆಯನ್ನು ಸೇರುವಂತೆ ಮಾಡಿದರೆ ಉತ್ತಮ. ಇದರಿಂದ ಪತ್ರದ ಎರಡು ಅಂಚುಗಳೂ ರಕ್ಷಿತವಾಗುತ್ತವೆ.

**ನೀರಿನಲ್ಲಿ ನೆನೆದ ಹಾಳೆಗಳ ದುರಸ್ತಿ** : ಹಸ್ತಪ್ರತಿಗಳು ನೀರಿನಲ್ಲಿ ನೆನೆದಾಗ ಅದರಲ್ಲಿರುವ ನೀರನ್ನು ಸೋರಿಸಿ ಹಾಳೆಗಳನ್ನು ನೆರಳಿನಲ್ಲಿ ಹರಡಿ ಒಣಗಿಸಬೇಕು.

ಕಷ್ಟು ಗಾಳಿ ಬೆಳಕುಗಳಿದ್ದರೆ ಉತ್ತಮ. ಹಾಳೆಗಳು ಒಂದಕ್ಕೊಂದಕ್ಕೆ ಅಂಟಿ ಂಡಿದ್ದರೆ ಕಾಗದದ ಚಾಕುವನ್ನು ಉಪಯೋಗಿಸಿ ಜೋಪಾನವಾಗಿ ಬಿಡಿಸ ಕು. ಹಾಳೆಗಳನ್ನು ಆಗಾಗ ಮಗುಚಿ ಹಾಕುತ್ತಿರಬೇಕು. ಒಣಗಿದ ನಂತರ ಕ್ಕೆ ಯಾವ ರೀತಿಯ ದುರಸ್ತಿಯು ಅವಶ್ಯಕವೊ ಅದನ್ನು ಮಾಡಬೇಕು.

**ಟ್ಟ ಹಾಳೆಗಳು** : ಹಾಳೆಗಳು ಸುಟ್ಟುಹೋದರೆ ಅಲ್ಲಿಗೆ ಅವು ನಾಶವಾದು ದೇ ಭಾವಿಸುತ್ತೇವೆ. ಆದರೆ ಆ ಭಾವನೆ ಸರಿಯಲ್ಲ. ಇವುಗಳನ್ನು ಕದಲಿಸದೆ ಗೆಯೆ ಇನ್‌ಫ್ರಾ–ರೆಡ್ ಬೆಳಕಿನಲ್ಲಿಟ್ಟು ಓದಬಹುದಾಗಿದೆ. ಇವುಗಳ ದುರಸ್ತಿ ಗಳ ಸ್ಥಿತಿಯನ್ನು ಅವಲಂಬಿಸಿದೆ. 1

ಹೀಗೆ ಹಲವು ವಿಧಾನಗಳಿಂದ ಹಸ್ತಪ್ರತಿಗಳನ್ನು ರಕ್ಷಿಸುವುದಲ್ಲದೆ ಅವುಗಳ ರುಪ್ರತಿಗಳನ್ನು ಕಾಗದದ ಮೇಲೆ ಬರೆದಿಡಬಹುದು ; ಇಲ್ಲವೆ ಮೈಕ್ರೊಫಿಲಂ ಮೂಲಕ ನಕಲು ಮಾಡಬಹುದು. ಕೈಯಿಂದ ಬರೆದ ಮರುಪ್ರತಿ ಮೂಲದ ಲ್ಯವನ್ನು ಕಳೆದುಕೊಂಡರೆ ಮೈಕ್ರೊಫಿಲಂ ಪ್ರತಿಯು ಮೂಲದ ಬೆಲೆಯನ್ನು ಳಿಸಿಕೊಳ್ಳುತ್ತದೆ. ಮೈಕ್ರೊಫಿಲ್ಮಿನಿಂದ ಮೂಲವನ್ನು ಶಾಶ್ವತವಾಗಿ ರಕ್ಷಿಸಿ ಶಾಗುವುದಲ್ಲದೆ ಹಲವಾರು ಪ್ರತಿಗಳನ್ನು ಮಾಡಿ ಎಲ್ಲಿಗೆ ಬೇಕಾದರೂ ಕಳುಹಿಸ ಸುದು. ಯಾವುದೇ ಮೂಲಪ್ರತಿ ಹಾಳಾದರೂ ಮೈಕ್ರೊಫಿಲ್ಮಿನಿಂದ ಎಂದಾ ೂ ಪ್ರತಿಯನ್ನು ಮಾಡಿಕೊಳ್ಳಬಹುದು. ಈ ಮೈಕ್ರೊಫಿಲ್ಮನ್ನು ಇದನ್ನು ಲಾಗಿಯೆ ನಿರ್ಮಿಸಲಾಗಿರುವ ಮೈಕ್ರೊಫಿಲಂ ರೀಡರಿನಲ್ಲಿ ಅಳವಡಿಸಿ ಓದ ುದು ; ಇಲ್ಲವೆ ಫೋಟೋ ಕಾಗದದ ಮೇಲೆ ಪ್ರತಿ ಮಾಡಿಕೊಳ್ಳಬಹುದು. ದ್ರ ಹಸ್ತಪ್ರತಿ ಭಂಡಾರ ಮಾಡಲು ಮೈಕ್ರೊಫಿಲಂ ಅತ್ಯಂತ ಉತ್ತಮ ಸನವಾಗಿದೆ. ಎಲ್ಲೆಲ್ಲಿಯೊ ಸಂಗ್ರಹವಾಗಿರುವ ಹಸ್ತಪ್ರತಿಗಳನ್ನು ಈ ಮೂಲಕ ನುಗೂಡಿಸಬಹುದು. ಕೈಯಿಂದ ಬರೆದು ಪ್ರತಿ ಮಾಡುವ ಕೆಲಸಕ್ಕೆ ೀಲಿಸಿದರೆ ಕಾಲ ಮತ್ತು ಖರ್ಚು ಎರಡರಿಂದಲೂ ಮೈಕ್ರೊಫಿಲಂ ಬಹಳ ತೆ ಮತ್ತು ಸುಲಭವಾಗಿದೆ.

---

ಸಂರಕ್ಷಣೆ ವಿಷಯದಲ್ಲಿ ವಿವರಗಳಿಗೆ ನೋಡಿ :
ಬಿ. ಎಸ್. ಸಣ್ಣಯ್ಯ, ಗ್ರಂಥ ಸಂರಕ್ಷಣೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ ೧೯೬೧.

ಮೂಲ ಹಸ್ತಪ್ರತಿಗಳನ್ನು ಸಂಗ್ರಹಿಸಲಾಗದಿರುವ ಸಂದರ್ಭಗಳುಂಟು. ಒಂದು ಸಂಸ್ಥೆಯೊ ಅಥವಾ ವ್ಯಕ್ತಿಯೊ ಹೊಂದಿರುವ ಹಸ್ತಪ್ರತಿಗಳನ್ನು ಹೊರಗೆ ಕೊಡದಿರುವಾಗ ಅವುಗಳನ್ನು ಮೈಕ್ರೊಫಿಲಂ ರೂಪದಲ್ಲಿ ಸಂಗ್ರಹಿಸುವ ಕೆಲಸವನ್ನು ಕೆಲವು ಸಂಸ್ಥೆಗಳು ಮಾಡುತ್ತಿವೆ. ಹೀಗೆ ಮೈಕ್ರೊಫಿಲಂ ರೂಪದಲ್ಲಿ ಸಂಗ್ರಹಿಸಿದವುಗಳನ್ನು ಅತ್ಯಂತ ಎಚ್ಚರಿಕೆಯಿಂದ ಕಾಪಾಡಬೇಕಾದುದು ಸಹಜವಾಗಿರುವಂತೆಯೇ ಓದುಗರಿಗೆ ಒದಗಿಸಬೇಕಾದುದೂ ಅನಿವಾರ್ಯವಾಗಿದೆ. ಓದುಗರಿಗೆ ಕೊಟ್ಟಾಗ ಉಪಯೋಗಿಸುವಲ್ಲಿ ಆಗುವ ಅಚಾತುರ್ಯದಿಂದ ಫಿಲ್ಮಿನ ಯಾವುದೇ ಭಾಗಕ್ಕೆ ಹಾನಿಯಾಗಬಹುದು. ಆದುದರಿಂದ ಮೂಲಪ್ರತಿಯನ್ನು ಮಾಸ್ಟರ್ ನೆಗೆಟಿವ್ ಎಂದು ಕಾಪಾಡಿಕೊಂಡು ಮರುಪ್ರತಿಯನ್ನು ಮಾಡಿ ಉಪಯೋಗಿಸುವುದು ಸೂಕ್ತವಾಗಿದೆ. ಇದರಿಂದ ಎರಡು ಪ್ರಯೋಜನಗಳಿವೆ. ಒಂದು, ಮೂಲಪ್ರತಿಯನ್ನು ಯಥಾವತ್ತಾಗಿ ಕಾಪಾಡಬಹುದು ; ಎರಡು, ಒಂದು ವೇಳೆ ಒಂದು ಪ್ರತಿ ಯಾವುದೇ ರೀತಿಯಲ್ಲಿ ಹಾನಿಗೊಳಗಾದರೆ ಮತ್ತೊಂದು ಪ್ರತಿಯಿಂದ ಸಹಾಯವಾಗುತ್ತದೆ. ರಕ್ಷಣಾ ದೃಷ್ಟಿಯಿಂದ ಈ ಎರಡೂ ಪ್ರತಿಗಳನ್ನು ಬೇರೆ ಬೇರೆ ಸ್ಥಳಗಳಲ್ಲಿಡುವುದು ಉತ್ತಮ. ಇದರಿಂದ ಯಾವುದೇ ಒಂದು ಸ್ಥಳದಲ್ಲಿದ್ದ ಪ್ರತಿ ನೈಸರ್ಗಿಕ ಅಪಾಯಗಳಿಗೆ ಒಳಗಾದರೆ ಮತ್ತೊಂದರಿಂದ ಅದನ್ನು ತುಂಬಿಕೊಳ್ಳಬಹುದು.

ಮೈಕ್ರೊಫಿಲಂ ಸೌಲಭ್ಯವಿಲ್ಲದೆಡೆಗಳಲ್ಲಿ ಹಸ್ತಪ್ರತಿಗಳ ಮರುಪ್ರತಿಗಳನ್ನು ಕಾಗದದ ಮೇಲೆ ಪ್ರತಿಮಾಡಿ ರಕ್ಷಿಸುವುದುಂಟು. ಇದು ನಶಿಸಿಹೋಗಿರುವ ಹಸ್ತಪ್ರತಿಗಳಿಗೆ ಅತ್ಯಗತ್ಯ ಕ್ರಮವಾಗಿದೆ. ಈ ಪ್ರತಿಗಳನ್ನು ಶಾಶ್ವತವಾಗಿ ರಕ್ಷಿಸಬೇಕಾಗಿರುವುದರಿಂದ ಇದಕ್ಕೆ ಕೈಯಿಂದ ತಯಾರಿಸಿದ ಉತ್ತಮ ಕಾಗದವನ್ನು ಬಳಸಬೇಕು ; ಮಸಿಯು ಗುಣಮಟ್ಟ ಉತ್ತಮವಾಗಿರಬೇಕು. ಪ್ರತಿಮಾಡುವವರು ಹಸ್ತಪ್ರತಿಗಳಲ್ಲಿ ಕಂಡುಬರುವ ಎಲ್ಲ ತರಹದ ಲಿಪಿಗಳನ್ನೂ ಸರಿಯಾಗಿ ಓದುವವರಾಗಿರಬೇಕು ; ಮೂಲದಲ್ಲಿದ್ದುದನ್ನು ಇದ್ದಂತೆಯೇ ಬರೆಯಬೇಕು ; ಯಾವುದೇ ಪದ ಅರ್ಥವಾಗದಿರುವಾಗ ಅದರಲ್ಲಿನ ಅಕ್ಷರ ಹೀಗೆಯೇ ಇರಬೇಕೆಂದು ಊಹಿಸಿ ಬದಲಾಯಿಸುವುದು ತುಂಬಾ ಅಪಾಯಕರ. ಅಕ್ಷರಗಳ ಬಗ್ಗೆಯಾಗಲಿ ಕಾಗುಣಿತಗಳ ವಿಚಾರವಾಗಿಯಾಗಲಿ ಸ್ವಾತಂತ್ರ್ಯ ವಹಿಸಬಾರದು. ಅಲ್ಲದೆ ಮೂಲ ಪ್ರತಿಕಾರರು ಬರೆದ ಭಾಗವನ್ನು ಬಿಡಬೇಕಾದಾಗ

ಂತಹ ಅಕ್ಷರಗಳ ಮೇಲೆ ಚುಕ್ಕಿಗಳನ್ನೊ ಅಡ್ಡಗೆರೆಗಳನ್ನೊ, ಇಲ್ಲವೆ ಹೆಚ್ಚು ಾಗ ಬಿಡಬೇಕಾದಾಗ ಅಷ್ಟಕ್ಕೂ ಕಂಸಗಳನ್ನು ಹಾಕಿ ತೋರಿಸಿರುವುದುಂಟು ; ೇರಿಸಬೇಕಾದ ಭಾಗಗಳನ್ನು ಖಾಲಿಯಿರುವ ಜಾಗದಲ್ಲಿ ಬರೆದು ಸೂಕ್ತ ಚಿಹ್ನೆ ೊಡನೆ ಸೂಚಿಸಿರುತ್ತಾರೆ. ಇಂತಹವುಗಳಿಲ್ಲವನ್ನು ಪ್ರತಿಕಾರರು ಎಚ್ಚರಿಕೆಯಿಂದ ಮನಿಸಿ ಬರೆಯಬೇಕಾಗುತ್ತದೆ.

ಪ್ರಾಚೀನ ಹಸ್ತಪ್ರತಿಗಳಲ್ಲಿ ಆಯಾ ಆಶ್ವಾಸ ಅಥವಾ ಸಂಧಿಯ ಪದ್ಯ ಂಖ್ಯೆಗಳನ್ನು ನಮೂದಿಸಿರುವುದಿಲ್ಲ ; ಇಂತಹ ಕಡೆಗಳಲ್ಲಿ ನೋಡಬೇಕಾದುದು ುಖ್ಯವಾಗಿ ಪತ್ರಸಂಖ್ಯೆ. ಈ ಸಂಖ್ಯೆಯನ್ನು ಪತ್ರದ ಮುಂಭಾಗ ಅಥವಾ ಂಬದಿಯ ಎಡಭಾಗದ ಆದಿಯಲ್ಲಿ ಇಲ್ಲವೆ ಎಡರಂಧ್ರದ ಪಕ್ಕದಲ್ಲಿ ಹಾಕುವು ಂಟು. ಸಾಮಾನ್ಯವಾಗಿ ಎಲ್ಲ ಹಸ್ತಪ್ರತಿಗಳಲ್ಲಿಯೂ ಕನ್ನಡ ಸಂಖ್ಯೆಗಳನ್ನೇ ಾಕಿರುವುದಾದರೂ ಅಪರೂಪವಾಗಿ ಕೆಲವು ಪ್ರತಿಗಳಲ್ಲಿ ಕನ್ನಡ ಅಕಾರಾದಿ ರ್ಣಮಾಲೆಯನ್ನು ಪದ್ಯಸಂಖ್ಯೆಗೆ ಬದಲಾಗಿ ಉಪಯೋಗಿಸಿದ್ದಾರೆ. ುದಾಹರಣೆಗೆ ಕ್ರಿ.ಶ. ೧೪೩೬ ರಲ್ಲಿ ಪ್ರತಿಯಾಗಿರುವ ಗುಣವರ್ಮನ ಪುಷ್ಪದಂತ ುರಾಣದ (ಕೆ ೫೧ ಕ ಅಸಂ ಮೈ) ಓಲೆಕಟ್ಟನ್ನು ನೋಡಬಹುದು. ಇದರಲ್ಲಿ ತ್ರದ ಎರಡೂ ಬದಿಗೆ ಬರವಣಿಗೆಯಿದ್ದು ಒಂದು ಕಡೆ ಪತ್ರಸಂಖ್ಯೆಯನ್ನು ನ್ನಡ ಅಕ್ಷರಗಳಲ್ಲಿ ಕೊಡಲಾಗಿದೆ.

ಯಾವುದೇ ಹಸ್ತಪ್ರತಿಯಾಗಲಿ ಓಲೆಗಳಲ್ಲಿ ಎರಡು ಕಡೆ ಬರವಣಿಗೆ ಯಿದ್ದರೂ ಒಂದೇ ಬದಿಗೆ ಪತ್ರಸಂಖ್ಯೆಯಿರುತ್ತದೆ. ಕಾಗದದ ಹಸ್ತಪ್ರತಿಗಳಲ್ಲಿ ಂದು ಕಡೆ ಬರವಣಿಗೆಯಿದ್ದರೆ ಒಂದೇ ಕಡೆ ಪತ್ರಸಂಖ್ಯೆಯಿರುವುದು. ಾಮಾನ್ಯ ; ಎರಡು ಕಡೆ ಬರವಣಿಗೆಯಿದ್ದಾಗ ಕೆಲವರಲ್ಲಿ ಒಂದುಕಡೆಯೂ, ುತ್ತೆ ಕೆಲವರಲ್ಲಿ ಎರಡು ಕಡೆಯೂ ಸಂಖ್ಯೆಗಳನ್ನು ಕೊಟ್ಟಿರುತ್ತಾರೆ. ಮೊದಲನೆ ುದನ್ನು ಪತ್ರಸಂಖ್ಯೆಯೆಂದೂ ಎರಡನೆಯದನ್ನು ಪುಟಸಂಖ್ಯೆಯೆಂದೂ ೇಳುತ್ತೇವೆ.

ಹಸ್ತಪ್ರತಿಗಳಲ್ಲಿ ಕಂಡುಬರುವ ಇಂತಹ ಎಲ್ಲ ಅಂಶಗಳನ್ನೂ ಗಮನಿಸಿ ್ರತಿ ಮಾಡಿದಾಗ ಮಾತ್ರ ಮರುಪ್ರತಿಗೆ ಮೂಲದ ಮೌಲ್ಯ ಸಾಧ್ಯವಾದಷ್ಟೂ ುಚ್ಚುತ್ತದೆ. ಎಂತಹ ವ್ಯಕ್ತಿಯೇ ಪ್ರತಿಮಾಡಿರಲಿ ಮೂಲಪ್ರತಿಯನ್ನು ುತ್ತೊಬ್ಬರಿಂದ ಓದಿಸಿ ತಾಳೆ ನೋಡಿ ಸರಿಪಡಿಸಬೇಕು. ಹೀಗೆ ಮಾಡುವುದ

ರಿಂದ ಮೂಲ ಪ್ರತಿಯನ್ನು ಇಬ್ಬರು ಪರಿಣತರು ಓದಿದಂತಾಗುತ್ತದೆ. ಒಬ್ಬರು ತಪ್ಪು ಓದಿದ್ದರೂ ಮತ್ತೊಬ್ಬರು ಅದನ್ನು ಸರಿಪಡಿಸಬಹುದು. ಆದರೆ ಹೋಲಿಸುವಾಗ ಪ್ರತಿಮಾಡಿದವರೇ ಮೂಲಪ್ರತಿಯನ್ನು ಮತ್ತೆ ಓದುವುದು ತಪ್ಪು. ಪ್ರತಿಕಾರರು ಅಕ್ಷರಗಳನ್ನು ವಿವಿಧ ರೀತಿಯಲ್ಲಿ ಬರೆದಿರುತ್ತಾರೆ. ಈ ಅಕ್ಷರಗಳೆಲ್ಲವನ್ನೂ ಎಲ್ಲರೂ ಒಂದೇ ರೀತಿ ಓದಲು ಸಾಧ್ಯವಾಗುವುದಿಲ್ಲ. ಇದಕ್ಕೆ ಸಾಕಷ್ಟು ಅನುಭವ ಮತ್ತು ತರಬೇತಿ ಆವಶ್ಯಕ, ಉದಾಹರಣೆಗೆ ಕನ್ನಡ ಓಲೆ ಪ್ರತಿಯಲ್ಲಿ ಬರುವ ಚಕಾರದ ಮಹಾಪ್ರಾಣವಾದ ಛಕಾರದ ಬರಹವನ್ನು "ದ" ಎಂದೇ ಅನುಭವವಿಲ್ಲದವರು ಓದುತ್ತಾರೆ. ಆದರೆ ಛಕಾರದ ಬರಹವು ಸಕಾರದಂತೆ ಇದ್ದರೂ, ಅದರ ಹೊಕ್ಕುಳಲ್ಲಿ ಒಂದು ಸೊನ್ನೆಯಿರುತ್ತದೆ. ಹೊಕ್ಕುಳಲ್ಲಿ ಸೊನ್ನೆ ಇದ್ದರೆ ಅದು ಛಕಾರ; ಇಲ್ಲದಿದ್ದರೆ ಅದು ದಕಾರ ಎಂಬುದನ್ನು ಅನುಭವ ಪ್ರತಿಮಾಡುವಾಗ ಮೂಲದ ಪದಗಳೋ ಅಕ್ಷರಗಳೋ ಪ್ರಮಾದದಿಂದ ಬಿಟ್ಟು ಹೋಗಬಹುದು. ಇವುಗಳೆಲ್ಲವನ್ನೂ ತಿದ್ದಿ ಸರಿಪಡಿಸಲು ತಾಳೆ ನೋಡುವುದು ಅತ್ಯಂತ ಅವಶ್ಯಕವೂ ಅನಿವಾರ್ಯವೂ ಆಗಿದೆ. ಪ್ರತಿಯಾದ ಮೇಲೆ ಅದಕ್ಕೆ ಉತ್ತಮ ರೀತಿಯ ರಟ್ಟುಕಟ್ಟಿ ಕೋಶಾಗಾರಕ್ಕೆ ಸೇರಿಸಬಹುದು.

# ಪರಿಚಲನೆ

ಸಂರಕ್ಷಿಸಿದ ಹಸ್ತಪ್ರತಿಗಳ ಪರಿಚಲನೆ (Circulation) ಹೇಗೆ ಂಬ ಬಗೆಗೂ ಯೋಚಿಸಬೇಕಾದುದು ಸಹಜವಾಗಿದೆ. ಹಸ್ತಪ್ರತಿಗಳನ್ನು ುಪಯೋಗಿಸಬಯಸುವವರು ಸಾಮಾನ್ಯವಾಗಿ ಹಸ್ತಪ್ರತಿ ಭಂಡಾರದಲ್ಲಿಯೇ ಳಿತು ನೋಡುವುದು ರೂಢಿಯಲ್ಲಿದೆ ; ಕೆಲವು ವ್ಯಕ್ತಿಗಳಿಗೆ ಸಂಸ್ಥೆಗಳಿಗೆ ರವಲು ಕೊಡುವುದೂ ರೂಢಿಯಲ್ಲಿದೆ. ಆದರೆ ಮನೆಗೆ ಸಂಸ್ಥೆಗೆ ಕೊಡುವುದ ುದ ಅಪಾಯವಿದೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಮೂಲಪ್ರತಿ ಾವುದೇ ಕಾರಣದಿಂದ ಕಳೆದು ಹೋದರೆ ಅದನ್ನು ಮತ್ತೆ ಪಡೆಯುವುದು ಧ್ಯವಿಲ್ಲದ ಮಾತು. ಎಷ್ಟೇ ಮೌಲ್ಯವನ್ನು ತೋರಿಸಿ ಜೀವವಿಮೆ ಮಾಡಿ ಂಚೆ ಮೂಲಕ ಕಳುಹಿಸಿದರೂ ಆ ವಿಮೆಯ ಹಣ ನಮಗೆ ಬಂದರೂ ಮೂಲ ್ರತಿ ಮಾತ್ರ ನಮಗೆ ದೊರೆತಂತಾಗುವುದಿಲ್ಲ. ಆದುದರಿಂದ ಯಾವುದೇ ಹಸ್ತಪ್ರತಿ ುನ್ನು ವ್ಯಕ್ತಿ ಸಂಸ್ಥೆ ಯಾರೇ ಎರವಲು ಬಯಸಿದರೂ ಅದರ ನಕಲನ್ನು ಯಿಂದ ಮಾಡುವ ಮೂಲಕವಾಗಿಯಾಗಲಿ ಮೈಕ್ರೊಫಿಲಂ ಫೋಟೋ ್ಟಟ್ ಪ್ರತಿಯ ರೂಪದಲ್ಲಾಗಲಿ ಒದಗಿಸುವುದು ಉತ್ತಮಮಾರ್ಗವೆಂದು ೇಳಬಹುದಾಗಿದೆ. ಅದರಲ್ಲಿಯೂ ಯಾವುದೇ ಕೃತಿಯ ಏಕೈಕ ಹಸ್ತಪ್ರತಿ ುನ್ನಂತೂ ಹೊರಗೆ ಕೊಡುವುದು ಅತ್ಯಂತ ಅಪಾಯಕರ.

ಕೋಶಾಗಾರದಲ್ಲಿಯೇ ಅಭ್ಯಾಸ ನಡೆಸಲು ಕೊಡುವ ಹಸ್ತಪ್ರತಿಗಳಿಗೂ ಪಾಯ ತಪ್ಪಿದ್ದಲ್ಲ. ಏಕೆಂದರೆ ಬರುವ ಎಲ್ಲ ಓದುಗರೂ ಒಂದೇ ಗುಣಮಟ್ಟ ವರಾಗಿರಲು ಸಾಧ್ಯವಿಲ್ಲ. ಅಭ್ಯಾಸ ಮಾಡಲು ಬಂದ ಜನ ಸಮಯ ಸಾಧಿಸಿ ದರಲ್ಲಿನ ಕೆಲವು ಹಾಳೆಗಳನ್ನೇ ಎಗರಿಸಬಹುದು. ಇದು ತೀರಾ ಅಲ್ಪರು ಾಡುವ ಕೆಲಸವೆಂದೂ, ಅಂತಹವರು ಇಂತಹ ಕಡೆಗಳಲ್ಲಿ ಬರುವುದು ಪರೂಪವೆಂದೂ ಪರಿಗಣಿಸಿದರೂ ಅದರ ಸಾಧ್ಯತೆಯನ್ನು ಯಾರೂ ತಳ್ಳಿಹಾಕು ಂತಿಲ್ಲ. ಆದುದರಿಂದ ಹಸ್ತಪ್ರತಿ ವಿಭಾಗದ ಸಿಬ್ಬಂದಿ ಸಾಕಷ್ಟು ಎಚ್ಚರದಿಂದಿರ ೇಕಾದುದು ಅವಶ್ಯಕ.

ಆದರೆ ಇಂತಹ ಸಂಭಾವ್ಯತೆಗಳಿವೆಯೆಂದು ಹಸ್ತಪ್ರತಿಗಳನ್ನು ಓದುಗರಿಗೆ ಒದಗಿಸದಿರುವುದು ಅಸಾಧುವಾಗುತ್ತದೆ. ಯಾವುದೇ ಸಂಸ್ಥೆ ಸಂಗ್ರಹಿಸಿರುವ ಹಸ್ತಪ್ರತಿಗಳೆಲ್ಲವೂ ಸಾರ್ವಜನಿಕರಿಂದ ಬಂದುವಾಗಿರುತ್ತವೆ. ಇದು ಉಚಿತವಾಗಿರಬಹುದು ; ಇಲ್ಲವೆ ಕೊಂಡುಕೊಂಡಿರಬಹುದು ; ಸಂಸ್ಥೆಯು ಹಲವಾರು ಕಟ್ಟುಪಾಡುಗಳನ್ನು ಮಾಡಿಕೊಂಡಿರಬಹುದು. ಆದರೂ ಇಂತಹ ಕೆಲಸಗಳಲ್ಲಿ ತೊಡಗಿರುವವರೇ ಕೇವಲ ಕೆಲವೇ ಜನರಿರುವಾಗ ಅದಷ್ಟೂ ಅವರಿಗೆ ಸಹಾಯ ಮಾಡಬೇಕಾದುದು ಹಸ್ತಪ್ರತಿಪಾಲಕರ ಕರ್ತವ್ಯವಾಗಿದೆ. ಇದರಿಂದ ಇನ್ನೂ ಅಗಾಧ ಪ್ರಮಾಣದಲ್ಲಿ ಪ್ರಕಟವಾಗಬೇಕಾಗಿರುವ ಪ್ರಾಚೀನ ಕೃತಿಗಳು ಸಾಂಸ್ಕೃತಿಕ ಸಂಪತ್ತಿಗೆ ಕೊಡುಗೆಗಳಾಗಿ ಹೊರಬಂದು ಅನೇಕ ಜನಮನವನ್ನು ಪ್ರವೇಶಿಸಲು ಸಹಕಾರಿಯಾಗುವುದಲ್ಲದೆ ಕನ್ನಡ ಸಾಹಿತ್ಯವೂ ಶ್ರೀಮಂತವಾಗುತ್ತದೆ.

ಆದರೆ ಇಂತಹ ಕಾರ್ಯದಲ್ಲಿ ಆಸಕ್ತರಾಗಿ ಹಸ್ತಪ್ರತಿಗಳನ್ನು ಉಪಯೋಗಿಸಿಕೊಳ್ಳಲು ಬಂದ ಕೆಲವರಿಗೆ ಹಸ್ತಪ್ರತಿ ಪಾಲಕರು ತಾವೇ ಆ ಕೃತಿಗಳನ್ನು ಮಾಡುತ್ತಿದ್ದೇವೆಂಬ ನೆಪಹೇಳಿ ಆಸಕ್ತರ ಉತ್ಸಾಹವನ್ನು ತಣ್ಣಗೆ ಮಾಡಿರುವ ಉದಾಹರಣೆಗಳೂ ಇವೆ. ಹೀಗೆ ಸಂಪಾದನಾ ಕಾರ್ಯಕ್ಕೆ ಹಸ್ತಪ್ರತಿಗಳನ್ನು ಹೊರಗಿನವರಿಗೆ ಕೊಟ್ಟರೆ ತಮ್ಮ ಸಂಸ್ಥೆಯಲ್ಲಿ ಅದೇ ಕೆಲಸಕ್ಕಾಗಿಯೇ ಇರುವವರಿಗೆ ಮಾಡಲು ಕೆಲಸವಿರುವುದಿಲ್ಲವೆಂಬ ಹೆದರಿಕೆ ಇದೆ. ಇಂತಹ ಪಾಲಕರಿಗೆ ಹಸ್ತಪ್ರತಿಗಳಲ್ಲಿ ದೊರೆಯುವ ಪ್ರಾಚೀನ ಸಾಹಿತ್ಯ ಎಷ್ಟು ವಿಪುಲವಾಗಿದೆಯೆಂಬುದಾಗಲಿ, ಈ ಕೆಲಸವೆಲ್ಲವನ್ನೂ ಮಾಡಿ ಮುಗಿಸಲು ಬೇಕಾದ ಶಕ್ತಿ ಮತ್ತು ಕಾಲದ ಕಲ್ಪನೆಯಾಗಲಿ ಇಲ್ಲವೆಂದೇ ಹೇಳಬೇಕಾಗಿದೆ. ಒಮ್ಮೆ ಇಂತಹ ಮಾತೊಂದು ಮೇಲಣ ಅಧಿಕಾರಿಗಳಿಂದ ಬಂದಾಗ ಕನ್ನಡದಲ್ಲಿ ಅಪ್ರಕಟಿತ ಪದ್ಯ ಗ್ರಂಥಗಳ ಪಟ್ಟಿಮಾಡಿ, ಸರಕಾರೀ ನೌಕರರು ನಿಯಮದಂತೆ ಮಾಡಬೇಕಾದ ಕೆಲಸದ ದಿನಗಳನ್ನೂ, ಕೆಲಸದ ವೇಳೆಯನ್ನೂ ಗಣನೆಗೆ ತೆಗೆದುಕೊಂಡು ಈ ಕೆಲಸ ಮಾಡಲು ಹತ್ತು ಮಂದಿ ಸಂಶೋಧಕರಿಗೆ ನೂರು ವರ್ಷಗಳು ಬೇಕಾಗುತ್ತದೆಂಬುದನ್ನು ನಾನು ಲೆಕ್ಕಾಚಾರ ಮಾಡಿ ತೋರಿಸಿದ್ದೇನೆ. ಇಂತಹ ಪದ್ಯ ಗ್ರಂಥಗಳಲ್ಲದೆ ಗದ್ಯ ಶಾಸ್ತ್ರ ತತ್ವ ಮತ್ತು ಕನ್ನಡ ಟೀಕನ್ನೊಳಗೊಂಡ ಸಂಸ್ಕೃತ ಗ್ರಂಥಗಳೀ ಮೊದಲಾದುವೆಲ್ಲವನ್ನೂ ಸಂಪಾದಿಸಿ ಪ್ರಕಟಿಸುವುದು ಯಾವ ಕಾಲಕ್ಕೆ ಎಂದು ಯೋಚಿಸುವಂತಾಗುತ್ತದೆ. ಈಗ ಸಂಗ್ರಹವಾಗಿರುವ ಹಸ್ತಪ್ರತಿಗಳ

ಜೊತೆಗೆ, ಹೊಸ ಹೊಸ ಗ್ರಂಥಗಳ ಹಸ್ತಪ್ರತಿಗಳು ದೊರೆಯುತ್ತಿರುತ್ತವೆ. ಅಲ್ಲದೆ ಈಗಾಗಲೇ ಪ್ರಕಟವಾಗಿರುವ ಗ್ರಂಥಗಳ ಹೊಸ ಹಸ್ತಪ್ರತಿಗಳು ದೊರೆತಲ್ಲಿ ಮತ್ತೊಮ್ಮೆ ಅವುಗಳ ಪರಿಷ್ಕರಣ ಮಾಡಬೇಕಾಗುತ್ತದೆ.

ಈ ವಿಷಯಗಳನ್ನೆಲ್ಲಾ ಮನಗಂಡಿದ್ದ ಹಿರಿಯ ವಿದ್ವಾಂಸರಾದ ಡಿ. ಎಲ್. ನರಸಿಂಹಾಚಾರ್ಯರು "ಪ್ರಾಚೀನ ಗ್ರಂಥಗಳ ಸಂಪಾದನೆಯನ್ನೆಲ್ಲಾ ಮಾಡಿ ಮುಗಿಸುವುದಕ್ಕೆ ದೀರ್ಘಕಾಲ ಬೇಕಾಗುತ್ತದೆ : ಅಲ್ಲದೆ ಒಂದು ಗ್ರಂಥವನ್ನು ಒಬ್ಬನು ಒಂದು ಸಲ ಸಂಪಾದನೆ ಮಾಡಿಬಿಟ್ಟರೆ ಸಾಲದು. ಆ ಗ್ರಂಥಗಳ ಹಸ್ತಪ್ರತಿಗಳು ಕಾಲದಿಂದ ಕಾಲಕ್ಕೆ ದೊರೆಯುತ್ತಲೇ ಇರುತ್ತವೆ. ಅವುಗಳ ಉಪಯೋಗವನ್ನು ಮಾಡಿಕೊಳ್ಳುವುದು ಭವಿಷ್ಯತ್ಕಾಲದ ಸಂಪಾದಕರಿಗೆ ಸೇರಿದ್ದು. ಆದ್ದರಿಂದ ಸಂಪಾದಕನ ಕೆಲಸ ನಿಂತು ಹೋಗುವುದಕ್ಕೆ ಅವಕಾಶವಿಲ್ಲ. ಅದೂ ನಡೆಯುತ್ತಲೇ ಇರುತ್ತದೆ. ಚೆನ್ನಾಗಿ ಸಂಪಾದಿತವಾಗಿರುವ ಗ್ರಂಥಗಳು ತಮಗೆ ಬೇಕೆಂದು ಜನ ಬಯಸಿದರೆ ಆ ಬಯಕೆಯ ಪೂರೈಕೆಯನ್ನು ಮಾಡಬೇಕಾಗುತ್ತದೆ, ಸಂಪಾದಕ"[1] ಎಂದು ಹೇಳಿದ್ದಾರೆ.

---

1. ಕ. ಗ್ರಂ. ಸಂ. ಪು. ೨೧೮

# ಅಕ್ಷರಸ್ಖಾಲಿತ್ಯಗಳು

ಪ್ರತಿಕಾರನು ಎಷ್ಟೇ ಎಚ್ಚರಿಕೆಯಿಂದ ಬರೆದರೂ ಅವನಿಗರಿವಿಲ್ಲದೆಯೇ ಕೆಲವು ತಪ್ಪುಗಳಾಗುವುದುಂಟು. ಅಲ್ಲದೆ ಪ್ರತಿಕಾರನ ಕಾವ್ಯಪ್ರೌಢಿಮೆ ಲಿಪಿ ಪರಿಣತೆ ಮೊದಲಾದುವುಗಳೂ ಹಸ್ತಪ್ರತಿಯಲ್ಲಾಗುವ ತಪ್ಪುಗಳ ಮೇಲೆ ಪರಿಣಾಮ ಬೀರುತ್ತವೆ. ಇದರಿಂದಲೇ ಒಂದೇ ಕೃತಿಯ ಹಲವು ಪ್ರತಿಗಳು ದೊರೆತಾಗ ವಿವಿಧ ಪಾಠಾಂತರಗಳನ್ನು ನಾವು ಕಾಣುತ್ತೇವೆ. ಸಾಮಾನ್ಯವಾಗಿ ಉಂಟಾಗುವ ತಪ್ಪುಗಳನ್ನು ಶ್ರೀ ಡಿ. ಎಲ್. ನರಸಿಂಹಾಚಾರ್ ಅವರು ಕಣ್ತಪ್ಪು ಕಿವಿತಪ್ಪು ಕೈತಪ್ಪುಗಳೆಂದು ಗುರುತಿಸಿದ್ದಾರೆ.

ಒಬ್ಬನೇ ಹಸ್ತಪ್ರತಿಯನ್ನು ನೋಡಿ ಬರೆಯುತ್ತಿರುವಲ್ಲಿ ಅಕ್ಷರಸಾದೃಶ್ಯದಿಂದ ಒಂದಕ್ಷರಕ್ಕೆ ಬದಲಾಗಿ ಮತ್ತೊಂದಕ್ಷರ ಬರಬಹುದು ; ಇಲ್ಲವೆ ಒಂದು ಅಕ್ಷರ ಅಥವಾ ಪದವೇ ಬಿಟ್ಟು ಹೋಗಬಹುದು ; ಅಥವಾ ಒಂದು ಪಂಕ್ತಿಯ ಕೊನೆಯಿಂದ ಮತ್ತೊಂದು ಪಂಕ್ತಿಯ ಆದಿಗೆ ಬರುವಾಗ ನಡುವಣ ಒಂದು ಪಂಕ್ತಿಯೇ ಇಲ್ಲವಾಗಬಹುದು. ಹೀಗೆ ಪಂಕ್ತಿಯೇ ಬಿಟ್ಟು ಹೋಗುವುದು ಓಲೆ ಗ್ರಂಥಗಳಿಂದ ಪ್ರತಿ ಮಾಡುವಾಗ ಹೆಚ್ಚಾಗಿ ಸಂಭವಿಸುವುದುಂಟು. ಇಂತಹ ತಪ್ಪು ಬರೆಯುವಾಗಲ್ಲದೆ ಓದುವಾಗಲೂ ಆಗಬಹುದು. ಹೀಗಾಗದಿರಲೆಂದೇ ಕೆಲವು ಪ್ರತಿಕಾರರು ಪ್ರತಿ ಪುಟದ ಪ್ರತಿಪಂಕ್ತಿಗೂ ಎರಡು ಕೊನೆಗಳಲ್ಲಿಯೂ ಸಂಖ್ಯೆಗಳನ್ನು ಕೊಟ್ಟಿರುವುದುಂಟು. ಹೀಗೆ ಬರೆಯುವಾಗ ಆದ ತಪ್ಪುಗಳನ್ನು ಬಿಡಬೇಕೆಂಬ ಹಾಗೆಯೇ ಸೇರಿಸಬೇಕಾದುವನ್ನು ಖಾಲಿಯಿದ್ದ ಜಾಗಗಳಲ್ಲಿ ಬರೆದು ಎಲ್ಲಿಗೆ ಸೇರಿಸಬೇಕೆಂಬ ಬಗೆಗೆ ಸೂಚನೆ ಕೊಟ್ಟಿರುವುದನ್ನು ಕಾಣಬಹುದು. ಅಂತೆಯೇ ಇಬ್ಬರು ಹೋಲಿಸಿದಾಗಲೂ ಕೆಲವು ತಪ್ಪುಗಳು ಹಾಗೆಯೇ ಉಳಿಯುವ ಸಂಭವವುಂಟು. ಒಬ್ಬರು ಓದಿ ಪ್ರತಿ ಮಾಡಿರುವುದನ್ನು ಹೋಲಿಸುವಾಗ ಮತ್ತೊಬ್ಬರು ಓದಬೇಕೆಂಬುದು ಸಾಮಾನ್ಯವಾಗಿದೆ. ಪ್ರತಿಕಾರರು ಓದುವಾಗ ಅಕ್ಷರಗಳನ್ನು ತಪ್ಪಾಗಿ ಓದಿದ್ದರೆ ಮತ್ತೊಬ್ಬರು ಸರಿಪಡಿಸಬಹುದೆಂಬ

ನಂಬಿಕೆಯಿಂದ ಹೀಗೆ ಮಾಡಲಾಗುತ್ತದೆ. ಆದರೆ ಹೀಗೆ ಮಾಡುವಾಗ ಒಬ್ಬರು ಓದಿದುದನ್ನು ಮತ್ತೊಬ್ಬರು ಸರಿಯಾಗಿ ಕೇಳಿಸಿಕೊಂಡು, ಬರೆದುದನ್ನು ಎಚ್ಚರಿಕೆಯಿಂದ ನೋಡಿಕೊಂಡು ಹೋದಾಗ ಮಾತ್ರ ಇದರ ಪೂರ್ಣ ಪ್ರಯೋಜನ ಪಡೆಯಬಹುದು. ಇಲ್ಲಿದಿದ್ದಲ್ಲಿ ಓದುವವರು ಸರಿಯಾಗಿ ಓದಿದರೂ ನೋಡಿಕೊಳ್ಳುವವರು ಯಾವುದೋ ಯೋಚನೆಯಲ್ಲಿ ಮುಳುಗಿ ಸರಿಯಾಗಿ ನೋಡಿಕೊಳ್ಳದಿರುವಾಗ ಮಾಡಿದ ತಪ್ಪುಗಳು ಹಾಗೆಯೇ ಉಳಿದು ಹೋಗುತ್ತವೆ. ಇಂತಹ ಎಲ್ಲ ತಪ್ಪುಗಳನ್ನೂ ಕಣ್ತಪ್ಪೆಂದು ಕರೆಯಬಹುದು.

ಪ್ರತಿ ಮಾಡುವಲ್ಲಿ ಒಬ್ಬರು ಓದಿ ಮತ್ತೊಬ್ಬರು ಅದನ್ನು ಬರೆಯುವಾಗ ಓದುವವರ ಉಚ್ಚಾರಣೆ ಸ್ಪಷ್ಟವಾಗದೆ ಬರೆಯುವವರು ಬೇರೆಯೇ ಬರೆಯಬಹುದು. ಅಂತೆಯೇ ಹೋಲಿಸುವಾಗಲೂ ಹೀಗೆಯೇ ಆಗಬಹುದು. ಇದರಿಂದ ಮೂಲದಲ್ಲಿದ್ದುದು ಬಿಟ್ಟು ಹೋಗಿ ಬೇರೆ ಅಕ್ಷರವೊ ಪದವೊ ಬರಬಹುದು. ಇದನ್ನು ಕಿವಿತಪ್ಪೆಂದು ಹೇಳಬಹುದು. 12567

ಕಣ್ತಪ್ಪು ಕಿವಿತಪ್ಪಿನ ಜತೆಗೆ ಕೈತಪ್ಪು ಆಗುವುದು ಸಹಜವಾಗಿದೆ. ಕಣ್ಣು ಸರಿಯಾಗಿ ನೋಡಿದರೂ, ಇಲ್ಲವೆ ಮತ್ತೊಬ್ಬ ಓದುವುದನ್ನು ಕಿವಿ ಸರಿಯಾಗಿ ಕೇಳಿದರೂ ಕೈ ತನ್ನದೇ ಆದ ಬೇರೆ ಅಕ್ಷರಗಳನ್ನು ಬರೆಯುವುದೊ ಬಿಡುವುದೊ ಮಾಡುವುದುಂಟು. ಇದು ಮಾನವ ಸಹಜವಾದ ದೌರ್ಬಲ್ಯವೆಂದು ಪರಿಗಣಿಸಿ ಇದನ್ನು ಕೈತಪ್ಪೆಂದು ಹೇಳಬಹುದು.

ಹಸ್ತಪ್ರತಿಯಲ್ಲಿನ ಲಿಪಿಜ್ಞಾನ ಪದಜ್ಞಾನ ಲಿಪಿಕಾರನಿಗೆ ಇಲ್ಲದಿದ್ದರೂ ತಪ್ಪುಗಳು ಆಗುತ್ತವೆ. ಇವು ಲಿಪಿಸಾದೃಶ್ಯದಿಂದ, ಹ್ರಸ್ವದೀರ್ಘಗಳ ಗೊಂದಲದಿಂದ, ಅಲ್ಪಪ್ರಾಣ ಮಹಾಪ್ರಾಣಗಳ ಜ್ಞಾನದ ಅಭಾವದಿಂದ, ಬಿಡಬೇಕಾದ ಹಾಗೂ ಸೇರಿಸಬೇಕಾದ ಭಾಗಗಳನ್ನು ಕೆಲವು ಸೂಚನೆಗಳ ಮೂಲಕ ತಿಳಿಸಿರುವುದನ್ನು ಸರಿಯಾಗಿ ಗಮನಿಸದಿರುವುದರಿಂದ ಪ್ರತಿಕಾರರು ತಪ್ಪು ಮಾಡುವುದುಂಟು. ಇಂತಹ ಸ್ಖಾಲಿತ್ಯಗಳನ್ನು ಶ್ರೀ ಡಿ. ಎಲ್. ನರಸಿಂಹಾಚಾರ್ಯರು ವಿವರವಾಗಿ, ಸೋದಾಹರಣವಾಗಿ, ಸಮರ್ಪಕವಾಗಿ ನಿರೂಪಿಸಿದ್ದಾರೆ.[1] ನಾವು ಅಷ್ಟು ದೀರ್ಘವಾಗಿ ಪರಿಶೀಲಿಸದಿದ್ದರೂ ಉದಾಹರಣೆಗಾಗಿ ಕೆಲವನ್ನಾದರೂ ಇಲ್ಲಿ

1. ಕ. ಗ್ರಂ. ಸಂ. ಪು. ೭೪–೧೩೩

ನಿರೂಪಿಸುವುದು ಉಚಿತವಾಗಿದೆ. ಇದರಿಂದ ಅಕ್ಷರ ಸ್ಖಾಲಿತ್ಯಗಳ ಕಲ್ಪನೆ ಖಚಿತವಾಗಿ ತಿಳಿದಂತಾಗುತ್ತದೆ.

ಅಕ್ಷರಸಾದೃಶ್ಯದಿಂದ ಅ–ಲ ; ಒ–ಬ ; ಕ–ತ್ರ ; ಖ–ಬ ; ಗ–ಸ' ; ಘ–ಪು ; ಚ–ಬ,ಜ ; ಜ–ಚ,ಜಿ ; ಡ–ದ,ರ ; ತ್ರ–ಕ,ರ,ಸ,ಲ,ಶ ; ದ–ಡ,ಪ,ಲ,ಯ ; ನ–ವ,ಸ,ಣ,ಗ ; ಪ–ವ,ಸ,ಮ,ಗ,ಛ ; ಬ–ಒ,ಚ,ಜ ; ಭ–ಬ,ಚ,ಖ ; ಮ–ಯ ; ಯ–ಮ ; ರ–ಕ,ನ,ದ,ರಿ,ಡ,ತ,ಅ,ಗ ; ಲ–ರ,ಳ,ಅ,ಉ ; ವ-ಪ,ದ ; ಸ–ನ ಎಂದು ಒಂದಕ್ಷರಕ್ಕೆ ಬದಲಾಗಿ ಮತ್ತೊಂದಕ್ಷರವನ್ನಾಗಿ ಓದಿಕೊಂಡಿರುವುದು ಕಂಡು ಬರುತ್ತದೆ. ಅಲ್ಲದೆ ಹ್ರಸ್ವ ದೀರ್ಘಗಳು, ಅತ್ವ ಎತ್ವಗಳು, ಎಕಾರಕ್ಕೆಯಕಾರ, ಅಲ್ಪಪ್ರಾಣ ಮಹಾಪ್ರಾಣಗಳು, ಶಷಸಗಳು ಅದಲು ಬದಲಾಗುವುದು, ವೃ–ವ್ರ, ಋ–ರು, ಕೃ–ಕ್ರ ಎಂಬಂತೆ ಆಗುವುದು ಉಂಟು. ಇಂತಹ ಇನ್ನೂ ಹಲವಾರು ತಪ್ಪುಗಳು ಪ್ರತಿಕಾರರಿಂದ ಆಗಿರುತ್ತವೆ. ಇಂತಹುದಕ್ಕೆ ಒಂದೆರಡು ಉದಾಹರಣೆಗಳನ್ನು ಇಲ್ಲಿ ನೋಡಬಹುದು.

ಶಕ ೧೨೬೪ರಲ್ಲಿ ಪ್ರತಿ ಮಾಡಲಾಗಿರುವ ರನ್ನನ ಸಾಹಸಭೀಮ ವಿಜಯದ ಓಲೆಪ್ರತಿ (ಕೆ ೭೫೭ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು)ಯಲ್ಲಿ ಬರುವ

**ವೃ॥ ಡೊಣೆ ಇಂದಂ ತೆಗೆವಾಗಳೊಂದು......ವೈರಿಮಾ**
**ಗ್ಗರ್ಣಮುಂ ದೆದಿಸುವಲ್ಲಿ (೩–೩)**

ಎಂಬಲ್ಲಿ ಬರುವ 'ದೊಣೆಯಿಂದಂ' ಎಂಬುದು 'ಡೊಣೆಇಂದಂ' ಎಂದಾಗಿರುವುದೂ, 'ಮಾಗ್ಗರ್ಣಮುಂ' ಎಂಬಲ್ಲಿ ಒಂದು 'ಗ' ಒತ್ತು ಹೆಚ್ಚಿಗಿರುವುದೂ, 'ದೆದಿಸುವಲ್ಲಿ' ಎಂಬುದನ್ನು 'ಭೇದಿಸುವಲ್ಲಿ' ಎಂದು ಓದಿಕೊಂಡು ದೀರ್ಘ ಹಾಕಬೇಕಾಗಿರುವುದನ್ನೂ ಗಮನಿಸಬಹುದಾಗಿದೆ. ಮುಂದೆ ಇದೇ ಪ್ರತಿಯಲ್ಲಿ 'ಛಲಮನೆ ಕೈಕೊಂಡು' ಎಂಬುದನ್ನು 'ದಲಮನೆ ಕೈಕೊಂಡು' (೬–೬ ವ) ಎಂದಿರುವುದನ್ನೂ ನೋಡಬಹುದು.

ಹಾಗೆಯೆ ಶಕ ೧೩೦೧ರಲ್ಲಿ ಪ್ರತಿಯಾಗಿರುವ ಆದಿಪುರಾಣದ

ಕಂ|| ಶ್ರೀ ರಮಣಿನಿಳಯು ಜಿನಾ
ಗಾರಂಗಳು ತಂನ ಜಸದವೊಲು ವಸುದೆಗಳಂ
ಕಾರಂಗಳಾಗೆ ಪೂರ್ಣವು
ನೊರಥನಾದಂ ಸರಸ್ವತಿ ಮಣಿಹಾರಂ
ವ|| ಅನ್ತು ತಂನ ಮಾಡ್ಸಿದ ಚೈತ್ಯಲಯುಂಗಳೊಳಾದಿ ಬಟ್ಟಾರಕರಾದಿಯಾಗಿ

ಬಲ್ಲಿ ದೀರ್ಘಗಳಿಲ್ಲದಿರುವುದನ್ನೂ, ನ ಒತ್ತಿಗೆ ಬದಲಾಗಿ ಅನುಸ್ವಾರ, ಹಾಪ್ರಾಣಕ್ಕೆ ಅಲ್ಪಪ್ರಾಣ, ಅನುಸ್ವಾರ ಮತ್ತು ತ ಕ್ಕೆ ಬದಲಾಗಿ ನ ಮತ್ತು ತ ತ್ತು, ತಾ ದೀರ್ಘವಿರಬೇಕಾದಲ್ಲಿ ತ ಕ್ಕೆ ಯ ಒತ್ತನ್ನೇ ದೀರ್ಘಮಾಡಿರು ದನ್ನೂ, ಭ ಅಕ್ಷರಕ್ಕೆ ಹೊಕ್ಕುಳ ಸೀಳದಿರುವುದನ್ನೂ ಗಮನಿಸಬಹುದು.

ಈ ಮೇಲಣ ಎರಡು ಕಾಲ ನಮೂದಿತ ಓಲೆ ಪ್ರತಿಗಳಿಗಿಂತ ಈಚೆಗೆ ಶಕ ೫೮ರಲ್ಲಿ ಪ್ರತಿಯಾಗಿರುವ ಗುಣವರ್ಮನ 'ಪುಷ್ಪದಂತ ಪುರಾಣ'ದ ಓಲೆಪ್ರತಿ ೫೧ ಕ ಅ ಸಂ. ಮೈಸೂರು)ಯಲ್ಲಿ ಬರುವ

ವೃ|| ಕುಲಬೂಬೃದ್ಬವೆ ಲಕ್ಷ್ಮಣಾಬಿನುತೆ ರಾಮೊತ್ಕಂಠೆ ವೈದೆಹಿ (೧-೮)
ವೃ|| ಕರಿವೃಂದಂ...... ನಕ್ಕಂರಥಚಕ್ರಮಾಗಿರೆ ವಾರಿದಿ (೭-೬೯)
ವೃ|| ಮೊದಲೊಳ್ತೀರ್ತ್ಥಕರಂಗೆ ತಿತ್ಥಜಲದಿಂ......

......ದಷ್ಟವಿದಾರ್ಚ್ಚನಾವಿದಿಗಳಿಂದ ಬ್ಯಬ್ಜನಂ
ಕಳದೌತೊದ್ದಾಮ......ನಿತ್ಯೆಜ್ವರಲುತೆಜಂ ದೆವದೆವಂ
ಗಬಿಷವವಿಡಿಯುಂ ಮಾಡಿ ಸಂತುಷ್ಟನಾದಂ (೭-೩)

ದಲಾದ ಬರವಣಿಗೆಯನ್ನು ನೋಡಿದರೆ ಮೇಲಣ ಮೂರೂ ಪ್ರತಿಗಳ ರವಣಿಗೆ ಒಂದೇ ರೀತಿಯಾಗಿರುವುದು ಕಂಡು ಬರುತ್ತದೆ. ಇಂತಹ ಹಸ್ತಪ್ರತಿ ಲ್ಲಿರುವುದನ್ನು ತಿದ್ದಿ ಬರೆಯಬೇಕಾದರೆ ಪ್ರತಿಕಾರ ಸಾಕಷ್ಟು ಕಾವ್ಯ ಪರಿಜ್ಞಾನ ಂದಿದವನಾಗಿರಬೇಕಾಗುತ್ತದೆ. ಸಾಮಾನ್ಯವಾಗಿ ಮೂಲದ ನಕಲನ್ನೆತ್ತುವ ತಿಕಾರನಿಗೆ ಇದರ ಅವಶ್ಯಕತೆ ಇಲ್ಲವಾದರೂ ಸಂಪಾದಕನಾಗಿ ಪ್ರತಿ ಮಾಡು ರನಿಗೆ ಇದು ಅತ್ಯಗತ್ಯವಾಗಿ ಬೇಕಾಗುತ್ತದೆ.

ಇದಿಷ್ಟೂ ಕಾಲನ ನಮೂದಿತ ಓಲೆ ಗ್ರಂಥಗಳಾದರೆ ಶಕ ೧೪೮೯ರಲ್ಲಿ ತಿಯಾಗಿರುವ ನಾಗವರ್ಮನ "ವರ್ಧಮಾನ ಪುರಾಣ"ದ ಕಾಗದದ ಹಸ್ತಪ್ರತಿ

ಯನ್ನು ಪ್ರತಿ ಮಾಡಿರುವವನು ಪ್ರಸಿದ್ಧ ಪ್ರತಿಕಾರ ಪಾಯಣ್ಣ. ೧೬ನೆಯ ಶತಮಾನದ ಈ ಪ್ರತಿಯಲ್ಲಿ

ವೃ॥ ವೊಂದಿರೆ ತಂನ ಚಿತ್ತದೊಳನುಗ್ರಹ ಬುದ್ದಿ ವೃಗಾದಿ ನಾಥನಂ
ತಾಂ ದಯೆಂಯಿಂ ಪ್ರಚಾರಿಸುವ ಚೆಷ್ಟಿಯನಾಗಿರಿ ತಂದರಂತರ
ಕ್ಕಂದಿಳಿದತ್ತಿರ್ಯಿಂದವಿಂತಕಿತ್ತಿರ್ ಪುರಸ್ಸರನಾಗಿ ಮೆಲ್ಲನೆ
ಯ್ತಂದನುದಾರಶಿಳನ ಬಿವಂದ್ಯ ಗುಣಂ ಗುಣರತ್ನಸಾಗರಂ ೫-೬೪

ಇಲ್ಲಿಯೂ ಕೂಡ ಒಕಾರಕ್ಕೆ ಬದಲಾಗಿ ವಕಾರ, ಸಜಾತ್ತಿಗೆ ಅನುಸ್ವಾರ, ಮಹಾಪ್ರಾಣಾಕ್ಷರಕ್ಕೆ ಹೊಕ್ಕುಳ ಸೀಳದಿರುವುದು, ದೀರ್ಘಗಳನ್ನು ಹಾಕದಿರುವುದು, ಬೇಡವಾದ ಒತ್ತುಗಳನ್ನು ಹಾಕಿರುವುದು– ಮೊದಲಾದುವನ್ನು ಗಮನಿಸಬಹುದು.

ಮೇಲಣ ಎಲ್ಲ ಬರವಣಿಗೆಗಳಿಗೆ ಆಯಾ ಕಾಲದ ರೂಢಿ ಕಾರಣವಾಗಿರಬಹುದು. ಆದರೆ ಕಾಲದ ರೂಢಿಯ ಜತೆಗೆ ಪ್ರತಿಕಾರರ ವ್ಯಕ್ತಿತ್ವದ ಮೇಲೂ ಪ್ರತಿಯ ಶುದ್ಧತೆ ನಿಲ್ಲುತ್ತದೆ ಎಂಬುದಕ್ಕೆ ಇತ್ತೀಚೆಗೆ ಎಂದರೆ ೨೦ನೆಯ ಶತಮಾನದಲ್ಲಿ ಪ್ರತಿಯಾಗಿರುವ ರನ್ನನ ಗದಾಯುದ್ಧದ (ಕೆ ಎ ೫೦ ಕಅಸಂ. ಮೈ) ಕಾಗದದ ಹಸ್ತಪ್ರತಿಯನ್ನು ನೋಡಬಹುದು.

ಉರಗೆಂದ್ರ ಲೊಕಮಂ ಫು
ಕ್ಕುರಗರೊಳಿಜಿದುರಗ ಪತಿಯ ನಿಜಸುತೆಯೊಡನಾ
ದರದಿಂ ಜಯಲಕ್ಷ್ಮಿಯೊಳೊಡೆ
ವೆರೆದಂ ಕಿರ್ತಿಯೊಳೆನೆಂದೆ ಪಸೆಂಪೊಳೆ ಪಾರ್ತ್ಥರ್ನಂ ೨-೪೨
ಎನಗೀರ್ವರು ವೆುಂಡುಂ... ಪೊಜಿಸೆಗೆ ಸಂಜಯ ೩-೬೭
ವ್ಯಡನೊಳ್ಪಾಸುಪತಾಸ್ತ್ರ್ಯಂ ೨-೩೮
ಕಾನಿನಂ......ಗಳಿತಾಶ್ರುಜಲದಿಂ ೩-೬೬

ಮೇಲನ ಬರವಣಿಗೆಯಲ್ಲಿ ಎಷ್ಟರ ಮಟ್ಟಿನ ಅಶುದ್ಧತೆ ತಾಂಡವವಾಡುತ್ತಿದೆ ಎಂಬುದನ್ನು ಗಮನಿಸಿ. ಇದಕ್ಕೆ ಮೂಲಪ್ರತಿ ಕಾರಣವೆ ಇಲ್ಲವೆ? ಎಂಬುದು ತಿಳಿದು ಬರುವುದಿಲ್ಲ. ಹಾಗೇನಾದರೂ ಮೂಲದಲ್ಲಿದ್ದಂತೆಯೇ ಪ್ರತಿ ಮಾಡಲಾಗಿದೆಯೆಂದರೆ ಪ್ರತಿಕಾರನ ದೋಷವಿರುವುದಿಲ್ಲ. ಆದರೆ ಪ್ರತಿಗಳನ್ನು ಮಾಡುವಾಗ

ಟ್ಟಿ ಅಶುದ್ಧ ಪಾಠಗಳು ರೂಪುಗೊಂಡಿರುತ್ತವೆ ಎಂಬುದಕ್ಕೆ ಉದಾಹರಣೆ
ಾಗಿ ಗಮನಿಸಬಹುದು.

ಮತ್ತೊಂದು ೨೦ನೆಯ ಶತಮಾನದ ಕಾಗದದ ಪ್ರತಿಯಾದ (ಕೆಏ೪೫೫
೨ ಸಂ ಮೈ) ಕಳಲೆ ನಂಜರಾಜನ 'ಲಿಂಗಪುರಾಣ'ದಲ್ಲಿ ಬರುವ ಬೇರೆ ರೀತಿಯ
ಗಳನ್ನು ನೋಡಬಹುದು. ಇದಕ್ಕೆ ಕಾರಣ ಊಹಿಸುವುದು ಕಷ್ಟವಾದರೂ
ನಿಸಬೇಕಾದ ಅಂಶವಾಗಿದೆ.

ಅನಂತ್ತರದಲ್ಲಿ । ಸೂತಪೌರಾಣೀಕನಿಂತೆಂದನು । ಕೇಳಿರೈಯ್ಯಾ ।
ರುಷಿಗಳಿರ । ಆ ಬಳಿಕ ಗರುಡ ಧ್ವಜನು ಬ್ರಂಹ್ಮದೇವನ ಮುಂದಿಟ್ಟುಕೊಂಡು ।
ಭೂತ ಭವಿಶ್ಯ । ದ್ವರ್ತಮಾನ । ವಾದ ವೇದಮಂತ್ರಗಳಿಂದ । ಪರಮೇಶ್ವರನನ್ನು
ಸ್ತುತಿಸ್ತನು। (೨ಂನೆಯ ಅಧ್ಯಾಯ ಪುಟ ೧೦೧)

ಟಲ್ಲಿ ಕಂಡು ಬರುವ ಅಕ್ಷರಸ್ಖಾಲಿತ್ಯಗಳ ಜತೆಗೆ ಎಲ್ಲೆಲ್ಲಿಯೊ ಗೀಟುಗಳನ್ನು
ಿರುವುದು ಒಂದು ಚಟದಂತೆ ತುಂಬಾ ಆಭಾಸವಾಗಿದೆ.

ಇಂತಹ ಸಾಮಾನ್ಯ ಸ್ಖಾಲಿತ್ಯಗಳಲ್ಲದೆ ಪ್ರತಿಕಾರರು ಮಾಡುವ ವಿಶೇಷ
ಲಿತ್ಯಗಳೂ ಹಸ್ತಪ್ರತಿಗಳಲ್ಲಿ ಕಂಡು ಬರುತ್ತವೆ. ಅವೆಂದರೆ ಕೆಲವರು ತಮಗೆ
ೋರದ ಭಾಗವನ್ನು ಬಿಡುವುದು ಅಥವಾ ಬದಲಾಯಿಸುವುದುಂಟು.
ುವುದೋ ದೈವದ ಹೆಸರನ್ನು ಬದಲಿಸಿ ತಮಗೆ ಬೇಕಾದ ದೈವದ ಹೆಸರನ್ನು
ುವುದೂ ತಮಗೆ ಪ್ರಿಯವಾದ ಕೆಲವು ಪದ್ಯಗಳನ್ನೋ ಭಾಗಗಳನ್ನೋ ಬೇರೆಡೆ
ದ ತಂದು ಸೇರಿಸಿರುವುದೂ ಕಂಡು ಬರುತ್ತದೆ. ಕೆಲವು ಪ್ರೌಢ ಪ್ರತಿಕಾರರು
ಸ್ವಂತ ರಚನೆಯನ್ನು ಸೇರಿಸಿ ಕವಿಗೆ ಬರುವ ಪುಣ್ಯ ತಮಗೂ ಬರಲೆಂದು
ಸುವುದೂ ಇದೆ. ಇಂತಹ ಕಾರ್ಯಗಳು ಚಂಪೂ ಕಾವ್ಯಗಳಿಗಿಂತ ಹೆಚ್ಚಾಗಿ
ದಿ ಸಾಂಗತ್ಯ ಕೃತಿಗಳಲ್ಲಿ ಕಂಡುಬರುತ್ತವೆ.

# ಗ್ರಂಥಸಂಪಾದನೆಗೆ ಹಸ್ತಪ್ರತಿ ತಯಾರಿಕೆ

ಹಸ್ತಪ್ರತಿಗಳ ಸಂಗ್ರಹ, ಸೂಚೀಕರಣ, ಸಂರಕ್ಷಣೆ, ಅಕ್ಷರಸ್ಖಾಲಿತ್ವಗಳ ಬಗೆಗೆ ಕೆಲವು ವಿಷಯಗಳನ್ನು ತಿಳಿದುಕೊಂಡಿದ್ದೇವೆ. ಹೀಗೆ ಸಂಗ್ರಹಿಸಿ ಸಂರಕ್ಷಿತವಾದ ಹಸ್ತಪ್ರತಿಗಳಲ್ಲಡಗಿರುವ ಗ್ರಂಥಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಒದಗಿಸಬೇಕಾದುದು ಅತಿ ಮುಖ್ಯ ಕೆಲಸವಾಗಿದೆ. ಇದು ಉಳಿದೆಲ್ಲ ಕೆಲಸಗಳಿಗಿಂತ ಕಠಿಣತರವಾದ ವಿದ್ವಜ್ಜನರು ಮಾತ್ರ ಕೈಗೊಳ್ಳಬಹುದಾದ ಬಹು ಅಮೂಲ್ಯವಾದ ಕರ್ತವ್ಯವಾಗಿದೆ.

ಹೀಗೆ ಯಾವುದೇ ಒಂದು ಗ್ರಂಥವನ್ನು ಸಂಪಾದಿಸಬೇಕೆಂದಾಗ ಆ ಕೃತಿಯ ದೊರೆಯುವ ಎಲ್ಲ ಹಸ್ತಪ್ರತಿಗಳನ್ನೂ ಪರಿಶೀಲಿಸುವುದು ಸಂಪಾದಕನ ಕರ್ತವ್ಯವಾಗಿದೆ. ಇವುಗಳಲ್ಲಿ ಶುದ್ಧಪ್ರತಿ ಯಾವುದು ? ಕಾಲಸಮೂದಿತ ಪ್ರತಿಯಿದೆಯೆ ? ಕಾಲಸಮೂದಿತವಾಗಿದ್ದರೆ ಕವಿಯ ಕಾಲಕ್ಕೆ ಎಷ್ಟು ಹತ್ತಿರದ ಪ್ರತಿ ? ಕವಿಯು ವಾಸವಾಗಿದ್ದ ಸ್ಥಳದಲ್ಲಿ ಅಥವಾ ಅದರ ಸಮೀಪದಲ್ಲಿ ದೊರಕಿದ ಪ್ರತಿಯೆ ? ಪ್ರಾಚೀನ ಕಾವ್ಯಗಳಾದಲ್ಲಿ ಟೀಕಾಕಾರಗಳನ್ನು ಉಪಯೋಗಿಸಲಾಗಿದೆಯೆ ? ಉಪಯೋಗಿಸಿದ್ದರೆ ಅದರ ಶುದ್ಧತೆಯೆಷ್ಟು ? ಮೊದಲಾದ ಎಲ್ಲ ವಿವರಗಳನ್ನೂ ಪರಿಶೀಲಿಸಿ ಶುದ್ಧಪ್ರತಿಯನ್ನು ಆಯ್ಕೆ ಮಾಡಬೇಕಾಗುತ್ತದೆ. ಲಿಪಿಯ ವೈಶಿಷ್ಟ್ಯದ ಮೇಲೆಯೂ ಪ್ರತಿಯ ಪ್ರಾಚೀನತೆಯನ್ನು ಗೊತ್ತು ಮಾಡಬಹುದಾದರೂ ಶುದ್ಧತೆಗೆ ಬರಿಯ ಪ್ರಾಚೀನತೆ ಪ್ರಯೋಜನಕ್ಕೆ ಬರುವುದಿಲ್ಲ. ಈ ಎಲ್ಲ ಅಂಶಗಳನ್ನೂ ಗಣನೆಗೆ ತೆಗೆದುಕೊಂಡು ಅಲ್ಲಿನ ಪಾಠಗಳ ಸ್ಖಾಲಿತ್ಯಗಳ ಮೇಲೆ ಶುದ್ಧಪ್ರತಿಯ ನಿರ್ಣಯವಾಗಬೇಕಾಗುತ್ತದೆ.

ಈ ಶುದ್ಧಪ್ರತಿಯನ್ನು ಮೂಲಪ್ರತಿಯನ್ನಾಗಿ ಬಳಸಿಕೊಂಡು ಉಳಿದವುಗಳನ್ನು ಯಾವ ಯಾವ ಗುಂಪಿಗೆ ಸೇರಿದುವೆಂಬುದನ್ನು ಪರಿಗಣಿಸಬಹುದು. ಇದಕ್ಕೆ ಪ್ರಾದೇಶಿಕತೆಯನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗಕೆತ್ತದೆ. ಈ ಎಲ್ಲಕ್ಕೂ ಮಿಗಿಲಾಗಿ ಕವಿಯ ಸ್ವಹಸ್ತಾಕ್ಷರ ಪ್ರತಿ ದೊರೆತಲ್ಲಿ ಸಂಪಾದಕನ ಕೆಲಸ



ು ಹಗುರವಾಗುತ್ತದೆ. ಆದರೆ ೧೯ನೆಯ ಶತಮಾನದ ಅಂತ್ಯದಲ್ಲಿದ್ದ ಬಸವಪ್ಪ
, ಸಂದಳಿಕೆ ಲಕ್ಷ್ಮೀನಾರಣಪ್ಪ ಮೊದಲಾದವರ ಸ್ವಹಸ್ತಾಕ್ಷರ ಪ್ರತಿಗಳು
ಯುತ್ತವೆಯೇ ಹೊರತು ಇದಕ್ಕೆ ಹಿಂದಿನವಾವುದೂ ... ಹೋಲಿಕೆಗೆ
ತಿರುವುದಿಲ್ಲ.

'ಶಿಲೆ ಮತ್ತು ತಾಮ್ರದ ಬರಹಗಳು ಕವಿಯು ಸ್ವಹಸ್ತಾಕ್ಷರಗಳಲ್ಲದಿದ್ದರೂ
ಬರೆದುಕೊಟ್ಟುದನ್ನು ಮತ್ತೊಬ್ಬ ಕೆತ್ತಿದ ಮೇಲೆ ತಾನು ಮತ್ತೆ ನೋಡಿ
ಬಹುದಾದ ತಪ್ಪುಗಳನ್ನು ತಿದ್ದಿರಬಹುದಾದುದರಿಂದ ಇವುಗಳನ್ನು
ಸ್ತಾಕ್ಷರ ಪ್ರತಿಗಳೆಂದು ಪರಿಗಣಿಸಬಹುದು. ಆದರೆ ಇಂತಹವು ಬಹಳ
ಹಾಗಿದ್ದು ಶಾಸನಕವಿ ತಾನು ರಚಿಸಿಕೊಟ್ಟ ಮೇಲೆ ಲಿಪಿಕಾರನು ಮಾಡುವು
ನೋಡಲು ಸಮಯಾವಕಾಶವಿಲ್ಲದಿರಬಹುದು'[1] ಎಂದು ಡಿ. ಎಲ್.
ಹಾಚಾರ್ ಹೇಳುತ್ತಾರೆ. ಶಾಸನಸಾಹಿತ್ಯ ಓಲೆ ಮತ್ತು ಕಾಗದದ
ಳಂತೆ ಹೆಚ್ಚು ಹೆಚ್ಚು ಪ್ರತಿ ಮರುಪ್ರತಿಗಳಾಗದಿರುವುದರಿಂದ ಮೂಲಕ್ಕೆ
ಮಟ್ಟಿಗೆ ಹತ್ತಿರವಾಗಿರುತ್ತವೆಂದು ತಿಳಿಯಬಹುದಾಗಿದೆ.

ಯಾವುದೇ ಗ್ರಂಥವನ್ನು ಸಂಪಾದನೆಗೆ ತೆಗೆದುಕೊಂಡಾಗ ಆರಿಸಿದ ಶುದ್ಧ
ಯಿಂದ ನಕಲು ಮಾಡಬೇಕಾಗುತ್ತದೆ. ಸಂಪಾದಕ ತಾನೇ ಪ್ರತಿ ಮಾಡಿದರೆ
ದು. ಇಲ್ಲದಿದ್ದಲ್ಲಿ ಹಸ್ತಪ್ರತಿಗಳ ಹಾಗೂ ಸಾಹಿತ್ಯದ ಬಗೆಗೆ ಸಾಕಷ್ಟು
ತಿ ಹೊಂದಿದವನಾಗಿರಬೇಕು. ಅಲ್ಲದೆ ಹೋಲಿಸುವಾಗ ಸಂಪಾದಕ ತಾನೇ
ವಹಿಸಬೇಕು; ಅನುಮಾನ ಬಂದೆಡೆಗಳಲ್ಲಿ ಮೂಲವನ್ನು ತಾನೇ ನೋಡಬೇಕು.
ಚೀನ ಕಾವ್ಯಗಳಾದಲ್ಲಿ ಪ್ರತಿಕಾರನಿಗೆ ಛಂದಸ್ಸಿನ ಬಗೆಗೆ ಪರಿಣತಿಯಿರಬೇಕು.
ವುದೇ ಪ್ರಾಚೀನ ಹಸ್ತಪ್ರತಿಯಲ್ಲಿ ಪದಗಳ ವಿಂಗಡಣೆಯಾಗಲಿ, ಛಂದಸ್ಸಿ
ಣವಾದ ಪಾದವಿಂಗಡಣೆಯಾಗಲಿ ಇರುವುದಿಲ್ಲ. ಪ್ರತಿ ಮಾಡುವಾಗ
ಲ್ಲವನ್ನೂ ಅನುಸರಿಸಿ ಬರೆಯಬೇಕಾಗುತ್ತದೆ. ಶಾಸ್ತ್ರಗ್ರಂಥವಾಗಿದ್ದಲ್ಲಿ
ಸ್ತ್ರದ ಬಗೆಗೆ ತಕ್ಕಮಟ್ಟಿನ ತಿಳುವಳಿಕೆಯಾದರೂ ಇರಬೇಕಾದುದು ಅವಶ್ಯಕ.
ಟ್ಟು ತಿಳುವಳಿಕೆ ಇಲ್ಲದಿದ್ದಲ್ಲಿ ಆ ವಿಷಯದ ತಜ್ಞರ ಸಹಾಯವನ್ನಾದರೂ
ಲೇ ಬೇಕಾಗುತ್ತದೆ. ಸಣ್ಣ ಪುಟ್ಟ ಅಕ್ಷರಸ್ಖಾಲಿತ್ಯಗಳನ್ನು, ಎಂದರೆ ಅತ್ವ

---

[1] ಗ್ರಂ ಸಂ. ಪು. ೫೮-೫೯

ಎತ್ವ ಹೆಚ್ಚುವರಿ ಒತ್ತುಗಳು ಹ್ರಸ್ವ ದೀರ್ಘ ಅಲ್ಪಪ್ರಾಣ ಮಹಾಪ್ರಾಣ ಶ ಷ ಸ ಮೊದಲಾದುವುಗಳನ್ನು ಸರಿಪಡಿಸಿಕೊಂಡು ಬರೆಯಬೇಕಾಗುತ್ತದೆ. ಹೀಗೆ ಸರಿಪಡಿಸಿ ಬರೆಯುವಾಗ ಸ್ಪಷ್ಟವಾಗಿ ತಪ್ಪು ಎಂದು ಕಂಡುಬಂದವುಗಳನ್ನು ಮಾತ್ರ ತಿದ್ದಬೇಕು. ಆದರೆ ಯಾವುದೇ ಪಾಠವನ್ನು ತಿದ್ದಬಾರದು.

ಪ್ರತಿ ಮಾಡಲು ಉಪಯೋಗಿಸುವ ಕಾಗದ, ಬರವಣಿಗೆಯ ರೀತಿ ಹೇಗಿರಬೇಕು ಎಂದು ಯೋಚಿಸಬೇಕಾದುದು ಆವಶ್ಯಕ. ಇಲ್ಲದಿದ್ದಲ್ಲಿ ಸಾಮಾನ್ಯವಾಗಿ ಪ್ರತಿ ಮಾಡಿದಂತೆ ಮಾಡಿದರೆ ಪಾಠಾಂತರಗಳನ್ನು ಗುರುತಿಸಲು ಕಷ್ಟವಾಗುತ್ತದೆ. ಈ ಪಾಠಾಂತರಗಳು ಸಂಪಾದನೆಗಾಗಿ ಸಿದ್ಧಪಡಿಸಿದ ಪ್ರತಿಪಂಕ್ತಿಗೆ ಸಮಾನಾಂತರವಾಗಿರಬೇಕು. ಆದುದರಿಂದ ಕೃತಿಯ ಎಷ್ಟು ಪ್ರತಿಗಳು ದೊರೆತಿವೆ ? ಪಾಠಾಂತರಗಳ ಅವಾಂತರವೆಷ್ಟೆಂಬುದನ್ನು ಮೊದಲೆ ಕೆಲವು ಪುಟಗಳನ್ನು ಪ್ರತಿ ಮಾಡಿ ಪಾಠಾಂತರ ಹಾಕಿ ನಿರ್ಣಯಿಸಿಕೊಳ್ಳಬೇಕಾಗುತ್ತದೆ. ಪ್ರತಿ ಮಾಡುವಾಗ ಹಾಳೆಯ ಮೇಲೆ ಕೆಳಗೆ ಅಕ್ಕಪಕ್ಕಗಳಲ್ಲಿ ಸಾಕಷ್ಟು ಜಾಗವನ್ನು ಬಿಟ್ಟಿರಬೇಕು. ಸಾಲು ಸಾಲಿಗೆ ಮಧ್ಯೆ ಪಾಠಾಂತರ ಸಂಖ್ಯೆಯನ್ನು ಹಾಕಲು ಹಾಗೂ ಪಾಠ ನಿರ್ಣಯದ ನಂತರ ಬೇರೆ ಪಾಠ ಬರೆಯಲು ಅನುಕೂಲವಾಗುವುದಕ್ಕೆ ಸ್ಥಳಾವಕಾಶವಿರಬೇಕು. ಪ್ರತಿ ಪಂಕ್ತಿಯ ಪಾಠಕ್ಕೂ ಆಯಾಯಾ ಪಂಕ್ತಿಗೇ ಬೇರೆ ಬೇರೆ ಸಂಖ್ಯೆಗಳನ್ನು ನಮೂದಿಸಬೇಕು. ಆ ಸಂಖ್ಯೆ ಪಾಠಾಂತರ ಪದಗಳ ಎರಡು ಕಡೆಯೂ ಇರಬೇಕು. ಈ ಪಾಠಾಂತರ ಸಂಖ್ಯೆ ಮತ್ತು ಪಾಠಾಂತರಗಳನ್ನು ಸೀಸದಕಡ್ಡಿಯಿಂದ ಗುರುತಿಸಬೇಕು. ಉಪಯೋಗಿಸಿದ ಎಲ್ಲ ಪ್ರತಿಗಳಿಗೂ ಬೇರೆ ಬೇರೆ ಸಂಕೇತಗಳನ್ನು ಕೊಡಬೇಕು. ಜೊತೆಗೆ ಆಯಾಯಾ ಪ್ರತಿಯ ಪತ್ರಸಂಖ್ಯೆಯನ್ನು ಅಲ್ಲಲ್ಲಿಯೇ ಗುರುತಿಸಿಕೊಳ್ಳುವುದು ಉತ್ತಮ. ಇದರಿಂದ ಯಾವುದೇ ಪ್ರತಿಯ ಪಾಠವನ್ನು ಮತ್ತೊಮ್ಮೆ ಪರಿಶೀಲಿಸಬೇಕಾದಾಗ ಅನುಕೂಲವಾಗುತ್ತದೆ.

ಶುದ್ಧ ಪ್ರತಿಗೆ ಹತ್ತಿರವಾದ ಪ್ರತಿಗಳಿಂದ ಮೊದಲು ಪಾಠಾಂತರಗಳನ್ನು ಗುರುತಿಸಬೇಕು ಹೀಗೆಯೇ ಕ್ರಮವಾಗಿ ಬೇರೆ ಪ್ರತಿಗಳನ್ನೂ ಉಪಯೋಗಿಸಬೇಕು. ಇಂತಹ ಪಾಠಾಂತರಗಳನ್ನು ಗುರುತಿಸುವಿಕೆ ಒಂದಕ್ಕಿಂತ ಹೆಚ್ಚು ಪ್ರತಿಗಳು ದೊರೆತಾಗ ಮಾತ್ರವಾಗಿರುತ್ತದೆ. ಒಂದು ಕೃತಿಯ ಏಕೈಕ ಹಸ್ತಪ್ರತಿ ದೊರೆತಾಗ ಪಾಠಾಂತರಗಳನ್ನು ಗುರುತಿಸಬೇಕಾಗಿಲ್ಲದಿರುವುದರಿಂದ ಅಕ್ಕಪಕ್ಕಗಳಲ್ಲಿ ಸ್ಥಳಾವ

ರಬೇಕಾಗಿಲ್ಲ. ಆದರೆ ಪಾಠ ನಿರ್ಣಯ ಮಾಡಿ ಮೂಲವನ್ನು ಬದಲಾಯಿಸಿ ಲು ಸಾಲು ಸಾಲಿಗೆ ಮಧ್ಯೆ ಅಂತರವಿರಬೇಕು ; ಊಹಿಸಿದ ಪಾಠವನ್ನು ಬರೆದು ಮೂಲದ ಪಾಠವನ್ನು ಕೆಳಗಡೆ ಕೊಡಲು ಹಾಗೂ ಮೂಲ ಬಗೆಗೆ ಸೂಚನೆಯೇನಾದರೂ ಇದ್ದರೆ ಬರೆಯಲು ಆಯಾ ಪುಟದ ಸಾಕಷ್ಟು ಸ್ಥಳಾವಕಾಶವಿರಬೇಕು. ಯಾವುದೇ ಸಂದರ್ಭದಲ್ಲಿಯೂ ಕೃತಿಯ ಎರಡು ರೂಪಾಂತರಗಳನ್ನು ಒಟ್ಟಿಗೆ ಸರಿಹೊಂದಿಸುವುದು ಾಗುವುದಿಲ್ಲ. ಇದಕ್ಕೆ ಉದಾಹರಣೆಯಾಗಿ ಕೇಶಿರಾಜನ 'ಶಬ್ದಮಣಿ ಣ'ವನ್ನು ನೋಡಬಹುದು. ಡಿ. ಎಲ್. ನರಸಿಂಹಾಚಾರ್ ಅವರಿಂದ ದಿತವಾಗಿರುವ ಪ್ರತಿ ಒಂದು ರೀತಿಯಾದರೆ, ಡಿ. ಕೆ. ಭೀಮಸೇನರಾವ್ ದ ಸಂಪಾದಿತವಾದ ಪ್ರತಿ ಮತ್ತೊಂದು ರೀತಿಯಾಗಿದೆ. ಎಷ್ಟೋ ಗಳು ವೃತ್ತಿಗಳು ಎರಡರಲ್ಲಿಯೂ ಸಮಾನಾಂತರವಾಗಿದ್ದರೂ ಬಹಳಷ್ಟು ಎರಡಕ್ಕೂ ಹೊಂದಿಕೆಯಾಗುವುದಿಲ್ಲ.

ಇದಿಷ್ಟು ಒಂದು ಅಥವಾ ಹೆಚ್ಚಿನ ಹಸ್ತಪ್ರತಿಗಳು ದೊರೆತಾಗ ಅನುಸರಿಸ ಾದ ಮಾರ್ಗಸೂಚಿಯಾಗಿದೆ. ೧೫–೨೦ ಹಸ್ತಪ್ರತಿಗಳು ಅಥವಾ ್ಕ ಹೆಚ್ಚು ಪ್ರತಿಗಳನ್ನು ಬಳಸಿಕೊಳ್ಳಬೇಕಾದಾಗ ಮತ್ತು ಹೆಚ್ಚು ತರಗಳನ್ನು ಗುರುತಿಸಬೇಕಾದಾಗ ಅದಕ್ಕೆ ತಕ್ಕ ಸ್ಥಳಾವಕಾಶ ಮಾಡಿಕೊಳ್ಳ ುತ್ತದೆ. ಪೂನಾದ ಭಂಡಾರ್ಕರ್ ಸಂಶೋಧನ ಸಂಸ್ಥೆಯಿಂದ ಪ್ರಕಟವಾದ ಭಾರತದ ಸಂಪಾದನೆಗೆ ಹಲವಾರು ಹಸ್ತಪ್ರತಿಗಳನ್ನು ಉಪಯೋಗಿಸ ುದರಿಂದ ಪ್ರತಿ ಪಾದಕ್ಕೂ ಒಂದೊಂದು ಪುಟವನ್ನು ಮೀಸಲಿರಿಸಿ, ಂದು ಅಕ್ಷರಕ್ಕೂ ಒಂದೊಂದು ಚಚ್ಚೌಕವನ್ನು ಮಾಡಿ ಉಪಯೋಗಿಸಿ ಹೀಗೆ ಹಸ್ತಪ್ರತಿಗಳ ಸಂಖ್ಯೆಯನ್ನೂ ವೈವಿಧ್ಯವನ್ನೂ ಗಮನಿಸಿ ನಾ ಹಸ್ತಪ್ರತಿಯನ್ನು ರೂಪಿಸಿಕೊಳ್ಳಬೇಕಾಗುತ್ತದೆ. 'ಗದುಗಿನ ಭಾರತ' ಣಿ ದರ್ಪಣ' ಮೊದಲಾದ ಕೃತಿಗಳಿಗೆ ಇಂತಹ ವ್ಯವಸ್ಥೆ ಅಗತ್ಯವಾಗುತ್ತದೆ. ವೈವಿಧ್ಯ ಎಂದಾಗ ಮತ್ತೊಂದು ರೀತಿಯ ಪಾಠಾಂತರಗಳನ್ನು ಕೊಟ್ಟಿರು ್ನ ಡಾ. ಎಲ್. ಬಸವರಾಜು ಅವರು ಸಂಪಾದಿಸಿರುವ 'ಆದಿಪುರಾಣ' ನಲ್ಲಿ ಗಮನಿಸಬಹುದು. ಸಾಮಾನ್ಯವಾಗಿ ಎಲ್ಲ ಸಂಪಾದಕರೂ ಬರುವ ಳಿಗೆ ಪಾಠಾಂತರ ಸಂಖ್ಯೆಗಳನ್ನು ಒಂದರಿಂದ ಆಯಾ ಪುಟದ ಕೊನೆಯ

ವರೆಗೆ ಮುಂದುವರಿಸುತ್ತಾರೆ. ಆದರೆ ಬಸವರಾಜು ಅವರು ಒಂದೊಂದು ಪದ್ಯ ಅಥವಾ ವಚನ ಭಾಗಗಳಿಗೆ ಬೇರೆ ಬೇರೆ ಸಂಖ್ಯೆಗಳನ್ನು ಕೊಟ್ಟಿರುತ್ತಾರೆ. ಎಂದರೆ ಪದ್ಯ ಸಂಖ್ಯೆಯನ್ನು ಕೊಟ್ಟು ಅದಕ್ಕೆ ಸೀಮಿತವಾದ ಪಾಠಗಳಿಗೆ ಒಂದರಿಂದ ಮುಂದುವರಿಸಿ ಅದರಲ್ಲಿಯೇ ಕೊನೆಗೊಳಿಸುತ್ತಾರೆ.

ಹಸ್ತಪ್ರತಿಗಳ ವಿಂಗಡಣೆ ಮತ್ತು ಉಪಯೋಗಗಳು ಹೇಗೆಂಬುದನ್ನು ತಿಳಿದುಕೊಳ್ಳಲು ಯಾವುದಾದರೂ ಒಂದು ಸಂಪಾದಿತವಾಗಿರುವ ಕೃತಿಯನ್ನು ಪರಿಶೀಲಿಸಬಹುದು. ಬಂಧುವರ್ಮನ 'ಜೀವ ಸಂಬೋಧನಂ' ಗ್ರಂಥದ ಸಂಪಾದನೆಗೆ1 ಒಂಬತ್ತು ಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಇವುಗಳಿಗೆ 'ಕ–ಟ್ರ ವರೆಗೆ ಸಂಕೇತಾಕ್ಷರಗಳನ್ನು ನೀಡಲಾಗಿದೆ. ಇವುಗಳಲ್ಲಿ ಆರು ಅಧಿಕಾರ ಮಾತ್ರ ಮುದ್ರಿತವಾದ 'ಟ' ಪ್ರತಿಯನ್ನು ಹೊರತುಪಡಿಸಿದರೆ ಉಳಿದವು ಎಂಟು ಹಸ್ತ ಪ್ರತಿಗಳು. ಇವುಗಳಲ್ಲಿ ಆರು ಓಲೆ ಮತ್ತು ಎರಡು ಕಾಗದದ ಪ್ರತಿಯಾಗಿದ್ದು, ನಾಲ್ಕು ಕಾಲನಮೂದಿತ ಪ್ರತಿಗಳಾಗಿವೆ.

**'ಕ'** : ಸಂಪಾದಕರೇ ಹೇಳುವಂತೆ ಕಾಗದದ ಪ್ರತಿಯಾದ ಇದರಲ್ಲಿ "ಹಲವು ಪಾಠಭೇದಗಳಿವೆ. ಕೆಲವು ವಾಕ್ಯಗಳೂ ಪದ್ಯಗಳೂ ಬಿಟ್ಟು ಹೋಗಿವೆ. ಕೆಲವು ಮಾರ್ಪಟ್ಟಿವೆ. ಕೆಲವು ಹೆಚ್ಚಾಗಿವೆ. ಹೀಗೆ ವಾಕ್ಯಗಳಲ್ಲಲ್ಲದೆ ಶಬ್ದಗಳಲ್ಲಿಯೂ ಹೆಚ್ಚು ಮಾರ್ಪಾಡಿದೆ. ಇದರಲ್ಲಿ ಪ್ರತಿಯೊಂದು ಅಧಿಕಾರಗಳ ಆದಿಯಲ್ಲಿ ಜಿನಸ್ತುತಿರೂಪವಾದ ಸಂಸ್ಕೃತ ಪದ್ಯವೂ, ಬಳಿಕ ಅಧಿಕಾರಾರ್ಥವನ್ನು ಸಂಗ್ರಹವಾಗಿ ಸೂಚಿಸುವ ಎರಡು ಪದ್ಯಗಳೂ ಇವುಗಳಲ್ಲಿ ಮೊದಲನೆಯದಕ್ಕೆ ಪ್ರತಿಪದಾರ್ಥವೂ ಎರಡನೆಯದಕ್ಕೆ ತಾತ್ಪರ್ಯಾನುವಾದವೂ ಇದೆ, ಇದನ್ನು ಸೂತ್ರವೆಂದೂ ವ್ಯವಹರಿಸಿದೆ. ಹೀಗೆಯೇ ಅಧಿಕಾರಗಳ ಆದಿಯಲ್ಲೂ ಕೊನೆಯಲ್ಲೂ ಜಿನಸ್ತುತಿರೂಪವಾದ ಸಂಸ್ಕೃತ ಪದ್ಯಗಳಿವೆ. ಹೀಗೆ ಹನ್ನೆರಡು ಅಧಿಕಾರಗಳಿಂದ ಇಪ್ಪತ್ತುನಾಲ್ಕು ಮಂದಿ ಜಿನರ ಸ್ತೋತ್ರವನ್ನು ಸಂಪೂರ್ಣವಾಗಿ ಹೇಳಿದಂತಾಗುವುದು. ಇದರಲ್ಲಿ ಅಕ್ಷರಸ್ಖಾಲಿತ್ಯಗಳೂ ಗ್ರಂಥಪಾತವೂ ಇದೆ. ಇದರಲ್ಲಿ ಸಗರ ಚಕ್ರವರ್ತಿ ಕಥೆಯಲ್ಲಿ ಪಾಠಾಂತರವುಂಟು, ನಾಗಕುಮಾರನ ಕಥೆಯು ಗ್ರಂಥದ

1. ಸಂ : ಪಂಡಿತ ಎಚ್. ಶೇಷ ಅಯ್ಯಂಗಾರ್, ಗೌರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದರಾಸು, 1955.

ವಾಗಿಯೇ ಇದರಲ್ಲಿ ಸೇರಿಸಲ್ಪಟ್ಟಿದೆ." ಈ ಹೇಳಿಕೆಯನ್ನು ಗಮನಿಸಿದರೆ ಈ ಪ್ರತಿಯಲ್ಲಿ ಶುದ್ಧತೆಯಿಲ್ಲ. ಯಾರೋ ಪ್ರೌಢಪ್ರತಿಕಾರ ತನಗೆ ತಿಳಿದಂತಹ ೃತ ಶ್ಲೋಕಗಳನ್ನೂ ಟೀಕೆ ಟಿಪ್ಪಣಿಗಳನ್ನೂ ತುಂಬಿದ್ದಾನೆ ಎಂದು ಭಾವಿಸ ಂದು.

'ಖ' : ಇದು ಶ್ರವಣ ಬೆಳಗೊಳ ಜೈನಮಠದ ಪ್ರತಿ ; ಶಕ ೧೩೭೦ರಲ್ಲಿ ಾಗಿದೆ. ಸಂಪಾದಕರು ತಿಳಿಸುವಂತೆ 'ಇದರಲ್ಲಿ ಅಶುದ್ಧ ಪಾಠಗಳು ಯಾಗಿ ಪ್ರಾಚೀನತಮ ಪಾಠಗಳಿದ್ದುದರಿಂದ ಅದರ ಪಾಠವನ್ನೇ ಈ ಮುದ್ರಣದಲ್ಲಿ ಹೆಚ್ಚಾಗಿ ಉಪಯೋಗಿಸಿಕೊಂಡಿದೆ. ಖಿಲಗಳೂ ಇರುವುವು ು ಹೇಳಿರುವುದರಿಂದ ಇದು ಪ್ರಾಚೀನಪ್ರತಿಯಲ್ಲದೆ ಶುದ್ಧ ಪ್ರತಿಯಾಗಿಯೂ ಂಬರುತ್ತದೆ. ಆದುದರಿಂದ ಇದನ್ನು ಮೂಲಪ್ರತಿಯಾಗಿ ಬಳಸಿಕೊಂಡಿದ್ದಾರೆ ು ಹೇಳಬಹುದು.

12567

'ಗ' : "ಇದು ಮಂಗಳೂರು ಪ್ರಾಂತದ ಮೂಡಬಿದರೆಯಲ್ಲಿರುವ ಲೋಕನಾಥಶಾಸ್ತ್ರಿಗಳು ಕಳುಹಿಸಿ ಕೊಟ್ಟ" ಪ್ರತಿ ತಾಳಪತ್ರಾತ್ಮಕವಾದುದು, ಓಲೆಗಳಿವೆ. ೧೧ಳನೆಯ ಮುಂದುಗಡೆ ಗ್ರಂಥವು ಮುಗಿದಿದೆ" ಎಂದು ತ್ರ ಹೇಳಿದ ಸಂಪಾದಕರು ಉಳಿದ ಈ ಪ್ರತಿಯ ಗುಣಮಟ್ಟದ ಬಗೆಗೆ ನ್ನೂ ಹೇಳಿರುವುದಿಲ್ಲ. ಕೊಟ್ಟಿರುವ ಪಾಠಗಳನ್ನು ಗಮನಿಸಿದರೆ ಇದರಲ್ಲಿ ೃತ ಶ್ಲೋಕ ಟೀಕುಗಳಾಗಲಿ, 'ಖ' ಪ್ರತಿಯಿಂದ ಬೇರೆಯಾದ ಹೆಚ್ಚು ಗಳಾಗಲಿ ಕಂಡುಬರುವುದಿಲ್ಲ.

'ಘ' : "ಕಪ್ರತಿಯಂತೆಯೇ ಇದರಲ್ಲಿ ಅಧಿಕಾರಗಳ ಆದಿಯಲ್ಲಿ ೃತ ಪದ್ಯಗಳಿವೆ ; ಆದರೆ ಟೀಕೆಯಿಲ್ಲ. ಅಕ್ಷರಸ್ಖಾಲಿತ್ಯಗಳು ವಿಶೇಷ ದ್ದರೂ ಅಲ್ಲಲ್ಲಿ ವಿರಳವಾಗಿ ಶುದ್ಧಪಾಠಗಳೂ ಇವೆ, ಅಲ್ಲದೆ ನಿದರ್ಶನ ಕಥೆ . ಇದನ್ನು ಲೇಖಕರೇ ಬಿಟ್ಟಿರಬಹುದು.... ಆದ್ಯಂತ್ಯಗಳಲ್ಲಿ ಶ್ರೀನಿವಾಸಪರ ್ಮಣೇನಮಃ... ಶ್ರೀ ಜನಾರ್ದನಾಯ ನಮಃ ಸಂಪೂರ್ಣಂ ಎಂದಿರುವುದ ಇದನ್ನು ಬರೆದವನು ವೈಷ್ಣವನಾಗಿರಬೇಕು (ಜೈನನಲ್ಲ)" ಎಂದು ದ್ದಾರೆ. ಇದು ಕಾಗದದ ಪ್ರತಿಯಾಗಿದೆ.

'ಚ' : "ಇದರಲ್ಲಿಯೂ ಕ ಪ್ರತಿಯಂತೆಯೇ ಅಧಿಕಾರಗಳ ಅದ್ಯಂತದಲ್ಲಿ ಸಂಸ್ಕೃತ ಪದ್ಯ ಟೀಕೆಗಳಿವೆ. ಓಲೆಗಳೆಲ್ಲವೂ ತುಂಬಾ ಶಿಥಿಲವಾಗಿ ನುಸಿಹುಳುಗಳ ಬಾಯಿಗೆ ತುತ್ತಾಗಿ ಓಲೆಗಳ ಭಾಗಗಳೂ ತ್ರುಟಿತವಾಗಿವೆ. ಇದರ ಪಾಠಗಳನ್ನು ಅಲ್ಲಲ್ಲಿ ಮುದ್ರಣದಲ್ಲಿ ತೆಗೆದುಕೊಂಡಿದೆ." ಎಂದು ಸಂಪಾದಕರು ವಿವರಿಸಿದ್ದಾರೆ.

'ಛ' : ಇದು ಶಕ ೧೭೭೪ರ ಓಲೆಪ್ರತಿ. "ಇದು ಉತ್ತಮ ಸ್ಥಿತಿಯಲ್ಲಿದೆ. ಅಲ್ಲಲ್ಲಿ ಮೇಲಾದ ಪಾಠಗಳುಂಟು" ಎಂದು ಸಂಪಾದಕರು ಹೇಳಿದ್ದಾರೆ. ಉಳಿದ ಯಾವ ವಿಷಯವೂ ತಿಳಿದುಬರುವುದಿಲ್ಲ. ಗ್ರಂಥದಲ್ಲಿ ಕೊಟ್ಟಿರುವ ಪಾಠಾಂತರಗಳನ್ನು ಗಮನಿಸಿದರೆ ಈ ಪ್ರತಿಯು ಸಮಗ್ರವಾಗಿದ್ದು 'ಖ' ಪ್ರತಿಗೆ ಹತ್ತಿರವಾಗಿರುವಂತೆ ಕಂಡು ಬರುತ್ತದೆ. ಸಂಸ್ಕೃತ ಶ್ಲೋಕ ಟೀಕೆಗಳಾವುವೂ ಕಂಡು ಬರುವುದಿಲ್ಲ. ಆದರೆ ಒಂದೆರಡೆಡೆಗಳಲ್ಲಿ ಮಾತ್ರ ಶ್ಲೋಕಗಳು ಕಂಡು ಬರುತ್ತವೆ.

'ಜ' : ಆರಾ ನಗರದ ಜೈನ ಭಾಂಡಾಗಾರದ ಓಲೆಪ್ರತಿ. "ಇದರಲ್ಲಿ ೧೬೩ ಓಲೆಗಳಿವೆ. ೧೬೩ ಓಲೆಯ ಮುಂಭಾಗದಲ್ಲಿ ಗ್ರಂಥ ಮುಗಿದಿದೆ. ಶಕ ೧೬೭೮ನೆಯ ಕ್ಷಯ ಸಂವತ್ಸರ ಅಯನ ಭಾದ್ರಪದಮಾಸದ ಪಕ್ಷ ಪೂರ್ವಪಕ್ಷ ತಿಥಿ ತೃತೀಯಾ ವಾಸರೆ ಶುಕ್ರದಲ್ಲಿ ಯಿಾ ದ್ವಾದಶಾನುಪ್ರೇಕ್ಷಾಗ್ರಂಥಂ ಪೂರಿತ ಲೇಖನದಿಂದೀ ಪ್ರತಿಯಾಯ್ತು" ಎಂದು ಸಂಪಾದಕರು ಮೂಲದಲ್ಲಿರುವುದನ್ನು ತಿಳಿಸಿದ್ದಾರೆ. ಉಳಿದ ಯಾವ ವಿಷಯುವನ್ನೂ ತಿಳಿಸಿರುವುದಿಲ್ಲ. ಕೊಟ್ಟಿರುವ ಪಾಠಗಳನ್ನು ಗಮನಿಸಿದರೆ ಕೆಲವು ಅಧಿಕಾರಗಳ ಆದಿ ಅಂತ್ಯಗಳಲ್ಲಿ ಮಾತ್ರ ಸಂಸ್ಕೃತ ಶ್ಲೋಕ ಮತ್ತು ಟೀಕುಗಳು ಕಂಡು ಬರುತ್ತವೆ.

ಝ : ಇದು ಕೊನೆಯ ಆರು ಅಧಿಕಾರಗಳನ್ನು ಮಾತ್ರ ಹೊಂದಿರುವ ಓಲೆಪ್ರತಿ "ಎಲ್ಲಾ ಪ್ರತಿಗಳಿಗಿಂತಲೂ ಇದು ತುಂಬಾ ಪ್ರಾಚೀನತಮವಾದುದು-ಪ್ರಾಚೀನತಮವಾದ 'ಖ' ಪ್ರತಿಗಿಂತಲೂ ೨೪ ವರುಷ ಹಿಂದಿನದು... ಇದರ ಓಲೆಗಳು ತುಂಬಾ ಅಗಲವಾಗಿ ಉದ್ದವಾಗಿವೆ. ಅಕ್ಷರಗಳೂ ತಮ್ಮ ಪ್ರಾಚೀನತಮತ್ವವನ್ನು ಚೆನ್ನಾಗಿ ಸೂಚಿಸುತ್ತವೆ... ಶಕ ವರುಷ ೧೩೪೬ (ಕ್ರಿ.ಶ. ೧೪೨೪)ನೆಯ ಕ್ರೋಧನ ಸಂವತ್ಸರದ ಆಸ್ವೈ (ಶ್ವಯು)ಜ ಬಹುಳ ಏಕಾದಶಿಯು ಬುಧವಾರದಂದು... ಬೊಮ್ಮಣ್ಣಗಳ... ಮಗ ಆದಿಯಣ್ಣನು ದೇವರಾಯ

ಣದ ಚತುರ್ವಿಂಶತಿ ತೀರ್ಥಂಕರ ಸ್ವಾಮಿಗಳವರ ಚೈತ್ಯಾಲಯದಲ್ಲಿ ಪ್ರತಿ
ಾನವಾಗಿ ಬರೆದುದು" ಎಂಬುದಾಗಿ ಸಂಪಾದಕರು ಪ್ರತಿಯಲ್ಲಿದ್ದುದನ್ನು
ದ್ದಾರೆ.

ಹೀಗೆ ಉಪಯೋಗಿಸಿದ ಎಂಟು ಹಸ್ತಪ್ರತಿಗಳಲ್ಲಿ 'ಕ ಖ ಝ' ಪ್ರತಿಗಳಿಗೆ
ದ ವಿವರಣೆಯನ್ನು ಉಳಿದವುಗಳಿಗೆ ನೀಡಿರುವುದಿಲ್ಲ. 'ಗ ಚ ಜ' ಪ್ರತಿಗಳ
ಯದಲ್ಲಂತೂ ತೀರಾ ಅಸಮರ್ಪಕ ವಿವರಣೆಯಿದೆ. ಇಷ್ಟು ಪ್ರತಿಗಳಲ್ಲಿ
'ಪ್ರಯೋಗವಿದೆ. ಎಂದಿರುವುದು ಒಂದೇ ಒಂದು ಹಸ್ತಪ್ರತಿಗೆ. ಪ್ರತಿಯ
ಚೀನತೆಗೆ ಇದೂ ಒಂದು ಅಳತೆ ಗೋಲಾಗಿರುವುದರಿಂದ ಇದರ ವಿಷಯದಲ್ಲಿ
ವಾಗಿ ತಿಳಿಸುವುದು ಅಗತ್ಯವಾಗಿದೆ. ಈ ಪ್ರತಿಗಳಲ್ಲಿ 'ಖ' ಪ್ರತಿಯು
ನಮೂದಿತವಾಗಿದ್ದು ಸುಮಾರು ೧೨೦೦ರಲ್ಲಿದ್ದ ಕವಿ ಬಂಧುವರ್ಮನಿಗೆ
ಪವರ್ತಿಯೂ ಸಮಗ್ರವೂ ಶುದ್ಧವೂ ಆಗಿರುವುದರಿಂದ ಇದನ್ನೇ ಮೂಲ
ಯಾಗಿ ಬಳಸಿಕೊಳ್ಳಲಾಗಿದೆ. ಮತ್ತೊಂದು ಇಂತಹದೇ ಶುದ್ಧಪ್ರತಿಯಾದ
'ಪ್ರತಿ 'ಖ' ಪ್ರತಿಗಿಂತ ೨೪ ವರ್ಷದಷ್ಟು ಪ್ರಾಚೀನವಾಗಿದ್ದರೂ ಆರು
ಕಾರಗಳನ್ನು ಮಾತ್ರ ಹೊಂದಿದ್ದು ಅಸಮಗ್ರವಾಗಿರುವುದರಿಂದ ಎರಡನೆಯ
ಯಾಗಿ ದೊರೆಯುವ ಭಾಗಕ್ಕೆ ಪಾಠಗಳನ್ನು ಉಪಯೋಗಿಸಿಕೊಳ್ಳಬಹು
ದೆ. ಈ ಎರಡೂ ಪ್ರತಿಗಳಲ್ಲಿ ಸಂಸ್ಕೃತ ಶ್ಲೋಕಗಳಾಗಲಿ ಟೀಕೆಗಳಾಗಲಿ
ವುದಿಲ್ಲ. ಆದರೆ 'ಝ' ಪ್ರತಿಯು ಆದಿಯ ಆರು ಅಧಿಕಾರಗಳಿಲ್ಲದಿದ್ದರೂ
ಥದ ಆದಿಯಲ್ಲಿ ಕೆಲವು ಸಂಸ್ಕೃತ ಶ್ಲೋಕಗಳು ಕಂಡು ಬರುತ್ತವೆ. ಆದರೂ
ಎರಡು ಪ್ರತಿಗಳೂ ಒಂದೇ ಪೀಳಿಗೆಯಿಂದ ಬಂದುವೆಂದು ಹೇಳಬಹುದು.
' ಪ್ರತಿಗಳಲ್ಲಿ ಗ್ರಂಥದ ಎಲ್ಲ ಅಧಿಕಾರಗಳಲ್ಲಿಯೂ ಸಂಸ್ಕೃತ ಶ್ಲೋಕಗಳೂ
ಗಳೂ ಕಂಡು ಬರುವುದಲ್ಲದೆ ಪರಿಶಿಷ್ಟವಾಗಿ ಕೊಟ್ಟಿರುವ ನಾಗಕುಮಾರನ
ಯೂ ಇದೆ. ಹೀಗೆ ಈ ಎರಡು ಪ್ರತಿಗಳೂ ಒಂದು ಗುಂಪಾಗಿ ನಿಲ್ಲುತ್ತವೆ.
' ಪ್ರತಿಗಳಲ್ಲಿ ಒಂದೆರಡೆಡೆ ಕೆಲವು ಶ್ಲೋಕಗಳಿದ್ದರೂ ಪಾಠಾಂತರಗಳನ್ನು
ನಿಸಿದರೆ 'ಖ ಝ' ಪ್ರತಿಗಳಿಗೆ ಹತ್ತಿರದವಾಗಿ ನಿಲ್ಲುತ್ತವೆ. ಉಳಿದ 'ಘ'
ಪ್ರತಿಯಲ್ಲಿ ಮೊದಲ ಆರು ಅಧಿಕಾರಗಳಿಗೆ ಶ್ಲೋಕ ಟೀಕುಗಳಿದ್ದು ಏಳನೆಯ
ಾರದಿಂದ ಮುಂದಕ್ಕೆ ಇವುಗಳನ್ನು ಬಿಡುವುದಲ್ಲದೆ ನಿದರ್ಶನ ಕಥೆಗಳನ್ನೂ
ದ್ದಾನೆ. ಹೀಗೆ ಇದೇ ಬೇರೆಯಾಗಿ ನಿಲ್ಲುತ್ತದೆ. 'ಜ' ಪ್ರತಿ 'ಕ ಚ'ಗಳನ್ನೇ

ಅನುಸರಿಸಿದರೂ ನಾಗಕುಮಾರನ ಕಥೆ ಇದರಲ್ಲಿ ಇಲ್ಲ. ಹೀಗೆ 'ಖ ಝ ಗ ಛ' ಪ್ರತಿಗಳನ್ನು ಒಂದು ಗುಂಪಾಗಿಯೂ, 'ಕ ಚ ಜ'ಗಳನ್ನು ಮತ್ತೊಂದು ಗುಂಪಾಗಿಯೂ, 'ಘ ಪ್ರತಿಯನ್ನೇ ಬೇರೆಯಾಗಿಯೂ ಭಾವಿಸಬೇಕಾಗುತ್ತದೆ. ಉಳಿದ ಅಚ್ಚಾದ ಆರು ಅಧಿಕಾರಗಳನ್ನುಳ್ಳ 'ಟ' ಪ್ರತಿಯು 'ಖ' ಗುಂಪಿನ ಪ್ರತಿಗಳನ್ನೇ ಹೋಲುವುದರಿಂದ ಇದು ಅಷ್ಟು ಪ್ರಾಮುಖ್ಯತೆ ಪಡೆಯುವುದಿಲ್ಲ.

ಇಲ್ಲಿ ಮತ್ತೊಂದು ಗಮನಿಸಬೇಕಾದ ಅಂಶವೆಂದರೆ ಸಂಕೇತಾಕ್ಷರಗಳನ್ನು ನೀಡುವಲ್ಲಿ ಅನುಸರಿಸಬೇಕಾದ ಮಾರ್ಗ. ಹಸ್ತಪ್ರತಿಗಳ ಆದ್ಯತೆಯ ಮೇಲೆ ಸಂಕೇತಾಕ್ಷರಗಳನ್ನು 'ಕ' ದಿಂದ ಪ್ರಾರಂಭಿಸಿದ್ದರೆ ಹೆಚ್ಚು ಸಮಂಜಸವಾಗಿರುತ್ತಿದ್ದಿತು. ಹಾಗೆ ಕೊಟ್ಟಿದ್ದರೆ 'ಕ ಖ ಗ ಘ ಚ ಛ ಜ ಝ ಟ' ಎಂದು ಕೊಡಬೇಕಾಗುತ್ತಿದ್ದಿತು. ಇದರಿಂದ ಓದುಗರಿಗೆ ಜ್ಞಾಪಕದಲ್ಲಿಟ್ಟುಕೊಳ್ಳಲು ಸುಲಭವಾಗಿರುತ್ತಿತ್ತೆಂದು ಭಾವಿಸಬಹುದು.

ಮತ್ತೊಂದು ರೀತಿಯ ಸಂಕೇತಾಕ್ಷರಗಳನ್ನು ಕೊಟ್ಟಿರುವುದನ್ನು ಡಾ. ಎಲ್. ಬಸವರಾಜು ಅವರು ಸಂಪಾದಿಸಿರುವ ಪಂಪನ 'ಆದಿಪುರಾಣ'ದಲ್ಲಿ ಗಮನಿಸಬಹುದು. ಇವರು ಉಪಯೋಗಿಸಿಕೊಂಡಿರುವ ಪ್ರತಿಗಳು ಹತ್ತು. ಅವುಗಳಿಗೆ ಕೊಟ್ಟಿರುವ ಸಂಕೇತಗಳು'ಹ ಚಿ ವ ದ್ವಿ ಮೈ ಐ ಓ NRಕಪ್ಪುNR ಕೆಂಪು NRಹಸಿರು; ಇವಲ್ಲದೆ ಡಾ|| ನರಸಿಂಹಾಚಾರ್ ಮತ್ತು ಪ್ರೊ. ಕುಂದಣಗಾರರು ಸಂಪಾದಿಸಿದ ಗ್ರಂಥಗಳ ಪಾಠಗಳಿಗೆ 'ಸ' ಮತ್ತು 'ಕು' ಎಂಬ ಸಂಕೇತ ನೀಡಿದ್ದಾರೆ. ಅಲ್ಲದೆ 'ಆದಿಪುರಾಣ'ದ ಪದ್ಯಗಳ ಉಲ್ಲೇಖಗಳನ್ನೊಳಗೊಂಡ ಇತರ ಆಕರ ಗ್ರಂಥಗಳಿಂದಲೂ ಪಾಠಗಳನ್ನು ಉಪಯೋಗಿಸಿಕೊಂಡಿರುವುದನ್ನು ಹೇಳಿದ್ದಾರೆ. ಆದರೆ ಈ ಪಾಠಗಳಿಗೆ ಯಾವ ಸಂಕೇತಗಳನ್ನು ಕೊಡಲಾಗಿದೆ ಎಂಬುದನ್ನು ಅರಿಕೆಯಲ್ಲಿ ಹೇಳಿರುವುದಿಲ್ಲ. ಒಳಗೆ ಪಾಠಾಂತರಗಳನ್ನು ಸೂಚಿಸುವಾಗ 'ಅನ್ಯತ್ರ' ಎಂದು ಹೇಳಿರುವುದನ್ನು ಈ ಆಕರ ಗ್ರಂಥಗಳವು ಎಂದು ಭಾವಿಸಬೇಕಾಗುತ್ತದೆ.

ಮೇಲಣ 'ಹ' ಕಾರದಿಂದ 'NRಹಸಿರು'ವರೆಗೆ ಕೊಟ್ಟಿರುವ ಸಂಕೇತಗಳನ್ನು ಯಾವುದೋ ಒಂದು ಆಧಾರದ ಮೇಲೆ ಕೊಡಲಾಗಿದೆ. ಆದರೆ ಈ ಹತ್ತೂ ಪ್ರತಿಗಳಿಗೆ 'ಕಗಚಜಟಡಣ ತದನ' ಎಂದು ಕೊಟ್ಟಿದ್ದರೆ ತುಂಬಾ ಸುಲಭ

ಾಗುತ್ತಿರಲಿಲ್ಲವೆ ? ಇದರಿಂದ ಅಚ್ಚಿನಲ್ಲಾಗುವ ಶ್ರಮ, ಕಾಗದದ ಮಿತವ್ಯಯ
ಾಧಿತವಾಗುತ್ತಿರಲಿಲ್ಲವೆ ? ಎಂದು ಯೋಚಿಸಬೇಕಾಗುತ್ತದೆ.

ಹಸ್ತಪ್ರತಿಗಳ ಜತೆಗೆ ಅಚ್ಚಾದ ಗ್ರಂಥಗಳಿಂದಲೂ ಸಂಪಾದನಾಕಾರ್ಯಕ್ಕೆ
ಹಾಯವಾಗುತ್ತದೆಂಬುದಕ್ಕೆ ೧೯೮೫ರಲ್ಲಿ ಪ್ರಕಟವಾಗಿರುವ ರನ್ನನ 'ಸಾಹಸ
ೀಮ ವಿಜಯ' ಗ್ರಂಥವನ್ನು1 ನೋಡಬಹುದು. ಇದರಲ್ಲಿ ಉಪಯೋಗಿಸಿರುವ
ಲೆ ಮತ್ತು ಕಾಗದ–ಎರಡು ಹಸ್ತಪ್ರತಿಗಳು ಭಿನ್ನ ಭಿನ್ನ ಮೂಲಗಳಿಂದ
ಂದವುಗಳಾಗಿವೆ. ದೊರೆತ ಈ ಎರಡನ್ನೇ ಉಪಯೋಗಿಸಿ ಕೆಲವರು ಈ
ಂಥ ಸಂಪಾದನೆ ಮಾಡಿದ್ದರು. ಈ ಎರಡರ ಜತೆಗೆ ಮೂರು ಅಚ್ಚಿನ
ತಿಗಳನ್ನು ಉಪಯೋಗಿಸಿ ಮತ್ತೆ ಈ ಗ್ರಂಥ ಸಂಪಾದನೆ ಮಾಡಲಾಗಿದೆ.
–೮೫ನೆಯ ಪದ್ಯದಲ್ಲಿ ಬರುವ 'ಸೈರಿಸಲ್ಕೆನಸುಂ ಬಂದಪು [ದಿಲ್ಲ] ಬರ್ಕೆ ಪಗೆವರ್
ನ್ನದ್ಧನಾಗಿರ್ದಪೆಂ' ಎನ್ನುವಲ್ಲಿ ಎರಡು ಹಸ್ತಪ್ರತಿಗಳಲ್ಲಿ ಮತ್ತು ಎರಡು
ಚ್ಚಿನ ಪ್ರತಿಗಳಲ್ಲಿ ಸಮರ್ಪಕ ಪಾಠ ದೊರೆಯದಿದ್ದುದರಿಂದ ತೀ. ನಂ. ಶ್ರೀ
ಠಯ್ಯ ಅವರ 'ಗದಾಯುದ್ಧ ಸಂಗ್ರಹ'ದಲ್ಲಿ ಊಹಿಸಲಾಗಿರುವ ಪಾಠವನ್ನು
ಂಗೀಕರಿಸಲಾಗಿದೆ.

ಮತ್ತೆ ೬–೩ರಲ್ಲಿ ಬರುವ 'ಕನತ್ಕನಕ [ತಾ]ಮರಂ ಧವಳ ಚಾಮರಂ
ನ್ಗುಳೊಳ್' ಎಂಬ ಪಾಠದಲ್ಲಿ 'ತಾ' ಅಕ್ಷರವನ್ನು ೧೯೮೫ರ ಪರಿಷ್ಕರಣದಲ್ಲಿ
ಊಹಿಸಲಾಗಿದೆ. ಈ ಪದ್ಯ ಒಂದು ಹಸ್ತಪ್ರತಿಯಲ್ಲಿಲ್ಲವಾಗಿದ್ದು ಉಳಿದ
ೂರರಲ್ಲಿ (ಅಚ್ಚಿನ ಪ್ರತಿಗಳೂ ಸೇರಿ) 'ಚಾಮರಂ ಚಾಮರಂ' ಎಂದು ಎರಡು
ಸೆಯೂ ಇದೆ. ತೀ. ನಂ. ಶ್ರೀ ಅವರು ಮೊದಲನೆಯದನ್ನು 'ಚಾಮರ'
ಂದಿಟ್ಟುಕೊಂಡು, ಎರಡನೆಯದನ್ನು 'ಪದ್ಮಮಂ' ಎಂದು ಊಹಿಸಿ ತಿದ್ದಿದ್ದಾರೆ.
ನತ್ಕನಕ ಚಾಮರ' ಎಂದರೆ ಹೊಳೆಯುವ ಚಿನ್ನದ ಚಾಮರ ಎಂದಾಗುತ್ತದೆ.
ದಕ್ಕಿಂತ 'ಕನತ್ಕನಕ ತಾಮರಂ' ಎಂದರೆ ಹೊಳೆಯುವ ಚಿನ್ನದ ತಾವರೆ ಅಥವಾ
ೊಂದಾವರೆ ಎಂಬುದು ಹೆಚ್ಚು ಸಮರ್ಪಕವಾಗಿ ಕಾಣುತ್ತದೆ. ಮುಂದೆ ಬರುವ

---

ಸಂ. ಬಿ. ಎಸ್. ಸಣ್ಣಯ್ಯ ಮತ್ತು ರಾಮೇಗೌಡ, ಪ್ರಸಾರಾಂಗ,
ೈಸೂರು ವಿಶ್ವವಿದ್ಯಾನಿಲಯ ಮೈಸೂರು. ೧೯೮೫

ಮತ್ತೊಂದು 'ಚಾಮರ'ಕ್ಕೆ ವಿಶೇಷಣ 'ಧವಳ' ಎಂಬುದು ಸೂಕ್ತವಾಗಿದ್ದು 'ಧವಳಚಾಮರ' ಎಂದಾಗುತ್ತದೆ. ಹೀಗೆ ವಿವಿಧ ಸಂಪಾದಕರು ಒಂದೇ ಗ್ರಂಥವನ್ನು ಸಂಪಾದಿಸಿದ್ದರೂ, ಬೇರೊಬ್ಬರು ಅದನ್ನೇ ಮಾಡುವಾಗ ಮತ್ತೂ, ಉತ್ತಮ ಪಾಠಗಳನ್ನು ಊಹಿಸಬಹುದಾಗಿದೆ. ಇದಕ್ಕೆ ಹಿಂದಣ ಅಚ್ಚಿನ ಪ್ರತಿಗಳು ಸಹಾಯಕವಾಗಿ ನಿಲ್ಲುತ್ತವೆ.

# ಪಾಠಪರಿಷ್ಕರಣ

ದೊರೆಯುವ ಹಸ್ತಪ್ರತಿಗಳಿಂದ ಪಾಠಾಂತರಗಳನ್ನು ಗುರುತಿಸಿಕೊಂಡ ಮೇಲೆ ಪಾಠಪರಿಷ್ಕರಣೆ ಮಾಡಬೇಕಾಗುತ್ತದೆ. ಇದು ತೀರಾ ದುಸ್ತರವಾದ, ಎಲ್ಲಕ್ಕಿಂತ ಹೆಚ್ಚು ಜವಾಬ್ದಾರಿಯುತವಾದ ಕೆಲಸವಾಗಿದೆ. "ಜೀರ್ಣ ದೇವಾಲಯವನ್ನು ಉದ್ಧಾರ ಮಾಡುವ ಕಾರ್ಯ ಎಷ್ಟು ಪವಿತ್ರವೋ ಅಷ್ಟೇ ಪುಣ್ಯಕರವಾದದ್ದು ಸಂಸ್ಕೃತಿಯ ಆಕರವಾಗಿರುವ ಪ್ರಾಚೀನ ಗ್ರಂಥಗಳ ಪಾಠಗಳನ್ನು ಪರಿಷ್ಕಾರಗೊಳಿಸುವುದು. ಕವಿ ಕಾವ್ಯವನ್ನು ಲೋಕಕ್ಕೆ ದಾನ ಮಾಡುತ್ತಾನೆ; ಅದನ್ನು ಸಂರಕ್ಷಿಸಿಕೊಂಡು ಬರುವುದು ಸಂಪಾದಕ ವಿದ್ವಾಂಸರ ಹೊಣೆಗಾರಿಕೆ"[1] ಎಂದು ಡಿ. ಎಲ್. ನರಸಿಂಹಾಚಾರ್ಯರು ಹೇಳಿರುವುದು ಅತ್ಯಂತ ಯುಕ್ತವಾಗಿದೆ. ಇದಕ್ಕೆ ವಿದ್ವತ್ತು ಪ್ರತಿಭೆಗಳು ಸಾಕಷ್ಟು ಕೂಡಿ ಬಂದಿರಬೇಕು. ಕವಿಯಿದ್ದ ಕಾಲದ ಜನಜೀವನ ಮತ್ತು ಇತರ ಶಾಸ್ತ್ರ ಪರಿಚಯ ಅಗತ್ಯವಾಗಿ ಇರಬೇಕು. ಎಲ್ಲಕ್ಕಿಂತ ಮಿಗಿಲಾಗಿ ಪ್ರಾಚೀನ ಕಾವ್ಯಗಳಲ್ಲಿ ಆಸಕ್ತಿ, ಮನಸ್ಸಿನ ಶಾಂತಿ ಸಮಾಧಾನಗಳು ಅತ್ಯಂತ ಅವಶ್ಯಕವಾಗಿರಬೇಕು. ಲಿಪಿಕಾರರು ತಮ್ಮ ಬಗೆಗೆ ಹೇಳಿಕೊಳ್ಳುವ 'ಭಗ್ನಪಷ್ಠ ಕಟಿ ಗ್ರೀವಾ ಬದ್ಧದೃಷ್ಟಿರಧೋಮುಖಂ' ಎಂಬ ಮಾತು ಈ ಪರಿಷ್ಕರಣಕಾರರಿಗೂ ಅನ್ವಯವಾಗುತ್ತದೆಂಬುದನ್ನು ನೆನಪಿಟ್ಟುಕೊಂಡು ಈ ಕೆಲಸಕ್ಕೆ ಕೈ ಹಾಕಬೇಕು.

ಪಾಠ ಪರಿಷ್ಕರಣದಲ್ಲಿ ಅನುಸರಿಸಬೇಕಾದ ಮಾರ್ಗಸೂಚಿಗಳನ್ನು ಮೊದಲು ಪರಿಚಿತಪಡಿಸಿಕೊಳ್ಳುವುದು ಒಳ್ಳೆಯದು.

1. ಪ್ರತಿ ಮಾಡಿರುವಲ್ಲಿ ಪದವಿಂಗಡಣೆ ಸರಿಯಾಗಿದೆಯೆ ಎಂಬುದನ್ನು ಪರಿಶೀಲಿಸಬೇಕು. ಅದರಲ್ಲಿಯೂ ಶಾಸ್ತ್ರ ಗ್ರಂಥಗಳಲ್ಲಿ ಇದರ ಮಹತ್ವ ಮತ್ತೂ

---

1. ಕ. ಗ್ರಂ. ಸಂ. ಪು. ೨೧೭

ಹೆಚ್ಚುತ್ತದೆ. ಸಂಪಾದಕರು ಸ್ವತಃ ಪ್ರತಿ ಮಾಡಿದ್ದರೆ ಉತ್ತಮ. ಇಲ್ಲದಿದ್ದಲ್ಲಿ ಅದನ್ನು ಪರಿಶೀಲಿಸುವುದು ಅಗತ್ಯವಾಗುತ್ತದೆ. ಹೀಗೆ ಪರಿಶೀಲಿಸಿ ಪದವಿಂಗಡಣೆಯಲ್ಲಿ ಆಗಿರುವ ತಪ್ಪುಗಳನ್ನು ಸರಿಪಡಿಸಬಹುದು. ಇದಕ್ಕೆ ಉದಾಹರಣೆಯಾಗಿ, 'ತೊರವೆ ರಾಮಾಯಣ'ದ ಯುದ್ಧಕಾಂಡದಲ್ಲಿ ಬರುವ

**ನೆರೆಯುದಂಬರ ವೀರತನದ**
**ಬ್ಬರಿನ ರಣ ಕಾರಣರಸದ ಕ**
**ಟ್ಬೊಜತೆ ಸೂಸಿತು...(೧೭-೩೭)**

ಎಂಬಲ್ಲಿ ಕಂಡುಬರುವಂತೆ 'ರಣ ಕಾರಣರಸದ' ಎಂದು ಪ್ರತಿಕಾರ ಓದಿಕೊಂಡು ಬರೆದರೆ, ಅದು ಮುಂದೆ 'ಕಾರಣರಸ' ಆಗುವ ಸಂಭವವಿಲ್ಲದಿಲ್ಲ. ಆದುದರಿಂದ ಇಂತಹವುಗಳ ಪಾಠದಲ್ಲಿ ಪದವಿಂಗಡಣೆ ಅರ್ಥಕ್ಕೆ ಅನುಗುಣವಾಗಿದೆಯೆ ಎಂಬುದನ್ನು ಗಮನಿಸಿ 'ರಣಕಾ ರಣರಸದ' ಎಂದು ತಿದ್ದಿಕೊಳ್ಳಬೇಕಾಗುತ್ತದೆ.

2. ಪದ್ಯಗ್ರಂಥಗಳಾದರೆ ಛಂದಸ್ಸಿಗನುಗುಣವಾಗಿದೆಯೆ ? ಪ್ರಾಸ ಸರಿಯಾಗಿದೆಯೆ ? ಎಂಬುದನ್ನು ನೋಡಬೇಕು. ಪ್ರಾಚೀನ ಹಸ್ತಪ್ರತಿಗಳಲ್ಲಿ ದೀರ್ಘಗಳಿಲ್ಲದೆ ಪದ್ಯದ ಪಾದವಿಂಗಡಣೆ ಇಲ್ಲದಿರುವುದರಿಂದ ಪ್ರಾಸ ಮತ್ತು ಛಂದಸ್ಸುಗಳಿಗನುಸಾರವಾಗಿ ತಿದ್ದಬೇಕಾದುದು ಅಗತ್ಯವಾಗುತ್ತದೆ.

ಬಂಧುವರ್ಮನ 'ಹರಿವಂಶಾಭ್ಯುದಯ'ದಲ್ಲಿ ಬರುವ

**ವೃ॥ ಹರಿವಂಶೋನ್ನತ ಪದ್ಮಷಂಡಹಿತಕೃದ್ವಿದ್ವಿಷ್ಟಸೇನೋ**
**ತ್ಕರೋದಯ ಭಸ್ಮೀಕೃತ ಶಕ್ತಿಯುಕ್ತಹತ ಭೋಗೋಪಭೋಗೋ**
**ತ್ತರ ಸೌಂದರ್ಯಮಹಾವಿಳಾಸಿ ಬಳಭೃತ್ಸಂಕ್ರಾಂತ ವಿಕ್ರಾಂತಕೇ**
**ಸರಿ ಕೃಷ್ಣಂ ಸುಖದಿಂದಮಿರ್ದನಭಿನೋತ್ಕೈಶ್ವರ್ಯದಿಂ ಧೈರ್ಯದಿಂ ೬-೬೦**

ಎಂದು ಬರೆಯಲಾಗಿವೆ. ಮೂಲದಲ್ಲಿ ಪಾದವಿಂಗಡಣೆ ಇಲ್ಲದಿದ್ದರೂ ಪ್ರಾಸವನ್ನನುಸರಿಸಿ ಪಾದವಿಂಗಡಣೆ ಮಾಡಲಾಗಿದೆ ; ದೀರ್ಘಗಳಿಲ್ಲದಿದ್ದರೂ ಪದದ

ಾಟಿಯನ್ನು ನೋಡಿ ದೀರ್ಘಗಳನ್ನು ಹಾಕಲಾಗಿದೆ ; ವೃತ್ತದ ನಾಲ್ಕು ಪಾದ ಳಿಗೆ ಸರಿಹೊಂದುವಂತೆ ಮಾಡಲಾಗಿದೆ. ಛಂದಸ್ಸಿನ ದೃಷ್ಟಿಯಿಂದ ಸರಿಪಡಿಸ ೕಕಾದಾಗ ಇದು ವೃತ್ತವಾದುದರಿಂದ ಯಾವ ವೃತ್ತಕ್ಕೆ ಸೇರಿದುದೆಂಬುದನ್ನು ಚಿತಪಡಿಸಿಕೊಳ್ಳಬೇಕು. ಮೊದಲಲ್ಲಿ 'ಹರಿವಂಶೋನ್ನತ' ಎಂದಿರುವುದರಿಂದ ಘುದ್ವಂದ್ವಂ ಗುರುದ್ವಂದ್ವಮಾಗಿರೆ ಮತ್ತೇಭ' ಎಂಬ ಸೂತ್ರ ಸಹಾಯಕ್ಕೆ ರಬೇಕಾಗುತ್ತದೆ. ಇದೇ ರೀತಿಯಲ್ಲಿ ಮೂರು ಮತ್ತು ನಾಲ್ಕನೆಯ ಪಾದಗಳ ದಿಯಲ್ಲಿಯೂ ಎರಡು ಲಘು ಎರಡು ಗುರುಗಳಿವೆ. ಈ ಮತ್ತೇಭವಿಕ್ರೀಡಿತ ೃತ್ತಕ್ಕೆ ಸರಿಹೊಂದುವಂತೆ ತಿದ್ದಬೇಕಾಗುತ್ತದೆ. ಏಕೈಕ ಪ್ರತಿಯಾದುದರಿಂದ ಾಠಾಂತರಗಳ ಸಹಾಯ ಇಲ್ಲವಾಗಿದೆ. ಆದುದರಿಂದ ಛಂದಸ್ಸಿಗನುಗುಣವಾಗಿ, ರುವ ಅರ್ಥಕೆಡದಂತೆ, ಇರುವುದನ್ನು ತಿದ್ದಿ, ಸಾಲದೆ ಬಂದುವನ್ನು ಸೇರಿಸಿ ದ್ದಬೇಕಾಗುತ್ತದೆ. ಹೀಗೆ ಮಾಡಿದಾಗ ಈ ಕೆಳಗಣ ಪದ್ಯ ರೂಪುಗೊಳ್ಳುತ್ತದೆ.



|| ಹರಿವಂಶೋನ್ನತಪದ್ಮಷಂಡಹಿತಕೃದ್ವಿದ್ವಿಷ್ಟಸೇನೋ [ದ್ಧತೋ]
ಕೃ[ರ] ಭಸ್ಮೀಕೃತ ಶಕ್ತಿಯುಕ್ತಹತ ಭೋ [ಗಾಂತೋ] ಪಭೋಗೋ [ತ್ತರೋ]
ತ್ತರ ಸೌಂದರ್ಯಮಹಾವಿಳಾಸಿ ಬಳಭೃತ್ಸಂಕ್ರಾಂತ ವಿಕ್ರಾಂತಕೇ
ಸರಿ ಕೃಷ್ಣಂ ಸುಖದಿಂದಮಿರ್ದನಭಿ [ನೂ] ತ್ನೈಶ್ವರ್ಯದಿಂ ಧೈರ್ಯದಿಂ ೬-೬೦

ಇದರಲ್ಲಿ ಮೂಲದ ಪಾಠಗಳಾವುವನ್ನೂ ತೆಗೆಯದೆ, ಅಲ್ಪ ಬದಲಾವಣೆ ೊಡನೆ ಕೆಲವು ಅಕ್ಷರಗಳನ್ನು ಸೇರಿಸಿ ತಿದ್ದಲಾಗಿದೆ. ತಿದ್ದಿದ ಮತ್ತು ಸೇರಿಸಿ ವುಗಳನ್ನು ಸಂಪಾದನಾ ಸೂತ್ರಕ್ಕನುಸಾರವಾಗಿ ಕಂಸಗಳಲ್ಲಿ ಕೊಟ್ಟು ಮೂಲ ಲ್ಲಿದ್ದುದನ್ನು ಪಾಠಾಂತರವಾಗಿ ಸೂಚಿಸಲಾಗಿದೆ. ಹೀಗೆ ಒಬ್ಬ ಸಂಪಾದಕರು ದ್ದಿ ಸರಿಪಡಿಸಿದುದನ್ನು ಮತ್ತೂ ಉತ್ತಮ ರೀತಿಯಲ್ಲಿ ಬೇರೊಬ್ಬರು ರ್ದ್ಧಪಡಿಸಬಹುದು. ಅದಕ್ಕೆ ಸಹಾಯವಾಗಿ ಮೂಲದ ಪಾಠಗಳು ಅಲ್ಲಿಯೇ ುತ್ತವೆ.

ಹೀಗೆ ಛಂದಸ್ಸಿಗನುಗುಣವಾಗಿ ನೋಡುವಾಗ ಕೆಲವು ಸಲ ಚಂಪೂ ಕಾವ್ಯ ಲ್ಲಿ ವಚನಭಾಗದಲ್ಲಿಯೇ ಸೇರಿಹೋಗಿರುವ ಪದ್ಯಗಳನ್ನೂ ಗುರುತಿಸಬಹುದು. ಗವರ್ಮನ 'ವರ್ಧಮಾನ ಪುರಾಣ'ದ ಹಸ್ತಪ್ರತಿಯಲ್ಲಿ ೩-೭೯ನೆಯ ವಚನ

ಭಾಗದಲ್ಲಿಯೇ ಸೇರಿಹೋಗಿರುವ ೩–೭೦ನೆಯ ಕಂದಪದ್ಯವನ್ನು ಈ ಗ್ರಂಥವನ್ನು ಸಂಪಾದಿಸುವಾಗ ಬಿಡಿಸಿ ಕೊಡಲಾಗಿದೆ. ಇದೇ ರೀತಿ ಬಂಧುವರ್ಮನ 'ಹರಿವಂಶಾಭ್ಯುದಯ'ದಲ್ಲಿಯೂ ೮–೬೬ ರಲ್ಲಿ ಮಾಡಿರುವುದನ್ನು ಗಮನಿಸಬಹುದು,

ಪದ್ಯದಲ್ಲಿ ಪ್ರಾಸವಿಲ್ಲದಾಗ ಅದನ್ನೂ ಹೀಗೆಯೇ ತಿದ್ದಬೇಕಾಗುತ್ತದೆ. 'ವರ್ಧಮಾನ ಪುರಾಣ'ದಲ್ಲಿ ಬರುವ

**ಕೋಲಾಟವಾಡುವಂತಿರೆ**
**ತೇರಾಳ್ಗಳಡುತರ್ಪ ಪೊಯ್ಯೆ ತುರಗಚಯಂಗಳ್ ೪–೬೪**

ಎಂಬಲ್ಲಿ ಎರಡನೆಯ ಪಾದದಲ್ಲಿ ಪ್ರಾಸವಿಲ್ಲದಿರುವುದನ್ನು ಗಮನಿಸಿ 'ತೇರಾಳ್ಗಳ' ಎಂಬುದನ್ನು 'ಕಾಲಾಳ್ಗಳ' ಎಂದು ತಿದ್ದಲಾಗಿದೆ.

3. ಸಂಧಿ ಸಮಾಸ ಮೊದಲಾದ ವ್ಯಾಕರಣ ನಿಯಮಗಳಿಗನುಸಾರವಾಗಿದೆಯೆ ಎಂಬುದನ್ನು ಪರಿಶೀಲಿಸಬೇಕು. ಬಂಧುವರ್ಮನ 'ಜೀವಸಂಬೋಧನೆ'ಯ

**ಜಗದೊಳ್ ಚೋದ್ಯಂ ಪಲವುಂ**
**ನೆಗಟ್ಟಿಿರ್ದ್ದಡಮೇನಮರ್ದನುಂಡು ಕಾಣ್ಬುದುಂ ೮–೧೫**

ಎಂಬ ಪದ್ಯದಲ್ಲಿ ಬರುವ 'ಮೇನಮರ್ದನುಂಡು' ಎಂಬುದಕ್ಕೆ ಪಾಠಾಂತರ 'ಮೇಂ ಮರ್ದನುಂಡು ಎಂಬುದೂ ಇದೆ. ಇಲ್ಲಿ ಅಮೃತ ಎಂಬರ್ಥ ಬರಬೇಕಾಗಿರುವುದರಿಂದ 'ಮೇನಮರ್ದನುಂಡು' ಎಂದೇ ಇಟ್ಟುಕೊಳ್ಳಬೇಕಾಗುತ್ತದೆ. ಹೀಗೆ ಸಂಧಿಯಾಗುವಾಗ ಪದದರ್ಥವನ್ನು ತಿಳಿದು ಸಂಧಿ ಮಾಡಬೇಕಾಗುತ್ತದೆ.

4. ಪ್ರತ್ಯಯಗಳೂ ಅರ್ಥಬದಲಾವಣೆ ಮಾಡಬಹುದು. ಇದಕ್ಕೆ ಡಿ. ಎಲ್. ನರಸಿಂಹಾಚಾರ್ಯರು 'ವಡ್ಡಾರಾಧನೆ'ಯ ಒಂದು ವಾಕ್ಯಖಂಡವನ್ನು (೨–೧೩) ಉದಾಹರಣೆಯಾಗಿ ಕೊಟ್ಟಿದ್ದಾರೆ.1 'ಅಧಮರ ಪೊಲ್ಲಮಾನಸರ ದುರ್ಜನರ

1. ಕ. ಗ್ರಂ. ಸಂ. ಪು.

ಜಾರಜಾತರ' ಎಂಬುದರಲ್ಲಿ ಬರುವ ದ್ವಿತೀಯಾ ವಿಭಕ್ತಿ ಪ್ರತ್ಯಯವಿಟ್ಟು ಅರ್ಥ ಮಾಡಿದಾಗ 'ಅಧಮರನ್ನು, ಪೊಲ್ಲಮಾನಸರನ್ನು, ದುರ್ಜನರನ್ನು, ಜಾರಜಾತರನ್ನು ಎಂದಾಗುತ್ತದೆ. ಆದರೆ ಇಲ್ಲಿ ಬಯ್ದುದ್ದು ಅಧಮರು ಮುಂತಾದವರನ್ನಲ್ಲ, ವಾಯುಭೂತಿ ಎಂಬುವನನ್ನು ; ಆದುದರಿಂದ ಇಲ್ಲಿ ದ್ವಿತೀಯಾ ವಿಭಕ್ತಿಗಳಿಗೆ ಸಾರ್ಥಕತೆಯಿಲ್ಲ ; 'ಅಧಮರಂ' ಮೊದಲಾಗಿ ಷಷ್ಠೀವಿಭಕ್ತಿಯೇ ಇರಬೇಕೆಂದು ಸೂಚಿಸುತ್ತಾರೆ.

. ಅಕ್ಷರಸ್ಖಾಲಿತ್ಯಗಳು ಹೇಗೆ ಆಗಬಹುದೆಂದು ನೋಡಿದೆವೊ ಅಂತಹವು ಗಳನ್ನು ಪರಿಶೀಲಿಸಬೇಕು. ಒಂದು ಅಕ್ಷರಕ್ಕೆ ಬದಲಾಗಿ ಮತ್ತೊಂದು ಅಕ್ಷರ ಬಂದಾಗ ಯಾವುದನ್ನು ಉಳಿಸಿಕೊಳ್ಳಬೇಕೆಂಬುದನ್ನು ಅರ್ಥದೃಷ್ಟಿ ಯಿಂದ ನೋಡಿ ನಿರ್ಧರಿಸಬೇಕಾಗುತ್ತದೆ. ಉದಾಹರಣೆಗೆ ಕ–ತ ಬದಲಾಗುವ ಒಂದು ಸಂದರ್ಭವನ್ನು ನೋಡಬಹುದು. ಇದಕ್ಕೆ 'ಆದಿಪುರಾಣ'ದಲ್ಲಿ ಬರುವ

ಕಿಪಿಗಿಂಪಂ ಕೊದಳೊಳ್ ಪೊದಟ್ದನುಡಿಗಳ್ ೭-೧೩೦

ಎಂಬಲ್ಲಿ 'ಕೊದಳೊಳ್' ಪದಕ್ಕೆ 'ತೊದಲೊಳ್' ಎಂಬ ಪಾಠವೂ ದೊರೆತರೂ 'ಕೊದಳೊಳ್' ಎಂಬುದು ಪ್ರಾಚೀನ ರೂಪವಾದುದರಿಂದ ಅದನ್ನೇ ಸಂಪಾದಕರು ಅಂಗೀಕರಿಸಿದ್ದಾರೆ. ಇಂತಹುದೇ ಒಂದು ಉದಾಹರಣೆಯನ್ನು ಬಂಧುವರ್ಮನ 'ಹರಿವಂಶಾಭ್ಯುದಯ'ದ ೬–೩೧ ವಚನದಲ್ಲಿ ಬರುವ 'ಅಂತಪ್ಪೊದಿಗಳ್' ಎಂಬ ಮೂಲಪಾಠದಲ್ಲಿನ 'ದಿ' ಬದಲಿಗೆ 'ಡಿ' ಮತ್ತು ದೀರ್ಘವನ್ನು ಸೇರಿಸಿ 'ಅಂತ ಪ್ಪೊಡೀಗಳ್' ಎಂದು ಮಾಡಿರುವುದು ಡ–ದ ಗಳ ಅದಲು ಬದಲಾವಣೆಗೆ ಗಮನಿಸಬಹುದು. ಹಾಗೆಯೆ ೬–೩೦ ವಚನದ ಮೂಲಪಾಠದಲ್ಲಿನ 'ಸ್ವಯಂ ಪ್ರಭಮೆಂ' ಎಂಬುದು 'ಸ್ವಯಂ ಪ್ರಭೆಯೆಂ' ಎಂದು ಬದಲಾಗಿರುವುದನ್ನೂ ನೋಡಬಹುದು.

. ಶಾಸ್ತ್ರವಿಷಯಗಳು ಬಂದಾಗ ಆಯಾ ಶಾಸ್ತ್ರಗ್ರಂಥಗಳನ್ನು ಸಹಾಯಕ್ಕೆ ತೆಗೆದುಕೊಳ್ಳಬೇಕು. ಇದಕ್ಕೆ ಬಂಧುವರ್ಮನ 'ಹರಿವಂಶಾಭ್ಯುದಯ'ದ

೬–೫೧ ವಚನದ ಚಾಣೂರ ಮತ್ತು ಕೃಷ್ಣರ ಮಲ್ಲಯುದ್ಧ ಸಂದರ್ಭದಲ್ಲಿ ಬರುವ 'ಲಂಘನ ವಲ್ಗನ ಪ್ಲವನ ವಿಕ್ರಮ ಭ್ರಮಂ ಕಾರಣಂಗಳಂ' ಎಂಬಲ್ಲಿ 'ವಲ್ಗನ' ಪದ ಹಸ್ತಪ್ರತಿಯಲ್ಲಿ 'ಪಲುಘ' ಎಂದಿದೆ. ಈ ಪದವನ್ನು 'ವಲ್ಗನ' ಎಂದು ತಿದ್ದಬೇಕಾದರೆ ಮಲ್ಲಯುದ್ಧಕ್ಕೆ ಸಂಬಂಧಪಟ್ಟ ಶಾಸ್ತ್ರಗ್ರಂಥಗಳ ಪರಿಶೀಲನೆಯಿಂದ ಮಾತ್ರ ಸಾಧ್ಯವಾಗುತ್ತದೆ. ಹಾಗೆಯೆ ಭರತನ 'ನಾಟ್ಯಶಾಸ್ತ್ರ' ದಲ್ಲಿ ಬರುವ 'ಕಟಿಶೀರ್ಷ' ಮತ್ತು 'ಭುಜಶೀರ್ಷ' ಪದಗಳನ್ನು ನಾಲ್ಕು ಪದಗಳಾಗಿ ವಿಂಗಡಿಸಿ 'ಕಟಿ ಶೀರ್ಷ ಭುಜ ಶೀರ್ಷ' ಎಂದು ಭಾವಿಸಿ ಅರ್ಥೈಸಿರುವ ಮನೋ ಮೋಹನ್ ಘೋಷ್ ಎಂಬುವವರು ಮಾಡಿರುವ ತಪ್ಪನ್ನು ಶ್ರೀ ಎಸ್. ಎನ್. ಕೃಷ್ಣ ಜೋಯಿಸರು ಉದಾಹರಿಸಿದ್ದಾರೆ.2 ಅಲ್ಲದೆ ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಉದಾಹರಿಸಿರುವ ಮತ್ತೊಂದು ಉತ್ತಮ ಉದಾಹರಣೆಯೆಂದರೆ 'ಪಾರ್ಶ್ವನಾಥ ಪುರಾಣ'ದ ಒಂದು ಪದ್ಯ. ಇದರ 'ಕದುಪಿನ ಚಿಕ್ಕ ಪೋತ ಕರಿಣೀಗಣಮಂ ನವಪಲ್ಲವಂಗಳಂ ಮುದದೊಳೆ ಮುನ್ನ ಮೇಯಿಸಿ' (೪–೧೧೩) ಎಂಬಲ್ಲಿ ಬರುವ 'ಚಿಕ್ಕ ಪೋತ' ಎಂಬುದಕ್ಕೆ ಸಣ್ಣ ಮರಿ ಎಂದು ಭಾವಿಸಿ ಪ್ರತಿಕಾರನೊಬ್ಬ ಬರೆದಿದ್ದಾನೆ. ಆದರೆ ಇಲ್ಲಿ 'ಚಿಕ್ಕ' ಎಂಬುದು 'ವಿಕ್ಕ' ಎಂದಿರಬೇಕೆಂದೂ ಇದಕ್ಕೆ ಹತ್ತು ವರ್ಷ ವಯಸ್ಸಿನ ಆನೆಯೆಂದು ಅರ್ಥವಿರುವುದನ್ನೂ ಸೂಚಿಸಿದ್ದಾರೆ. ಈ ಪದ ಅರ್ಥವಾಗದೆ 'ವಿಕ್ಕ–ಬಿಕ್ಕ–ಚಿಕ್ಕ' ಆಗಿರುವ ಸಂಭವವಿದೆಯೆಂದು ಹೇಳಿದ್ದಾರೆ.

7. ಶುದ್ಧ ಪ್ರತಿಯೆಂದು ಆರಿಸಿರುವ ಪಾಠಕ್ಕೆ ಪ್ರಾಧಾನ್ಯ ನೀಡಬೇಕು.

'ತೊರವೆ ರಾಮಾಯಣ'ದ ಯುದ್ಧಕಾಂಡದಲ್ಲಿ ಬರುವ

**ಸೆಳೆದು ಕೈದುವ ಬಿಸುಟನೆಂದಳ**
**ವಳಿಯದಿರು ನೀನಾವ ಮೆಯ್ಮಲಿ**
**ಬಳಸೆ ಬಳಸುವೆಯಿಕ್ಕದಂಗದಲಂಜಬೇಡೆಂದ ೨೩–೯**

---

2. ಹಸ್ತಪ್ರತಿಶಾಸ್ತ್ರ ಪು. 159

ಎಂಬ ಮೂರನೆಯ ಪಾದದ 'ಬಳಸೆ' ಪದಕ್ಕೆ 'ಬಳಕೆ' ಎಂಬ ಪಾಠಾಂತರ ಆರು ಪ್ರತಿಗಳಲ್ಲಿದ್ದರೂ ಶುದ್ಧಪ್ರತಿಯೆಂದು ಭಾವಿಸಿರುವ 'ಚ' ಪ್ರತಿಗೆ ಪ್ರಾಧಾನ್ಯತೆ ಯೀಯುವುದರಿಂದ 'ಬಳಸೆ' ಪದವನ್ನು ಸ್ವೀಕರಿಸಲಾಗಿದೆ. ಇದರಿಂದ ಪ್ರಾಚೀನ ಪ್ರತಿಗೆ ಪ್ರಾಧಾನ್ಯತೆಯಿತ್ತಿರುವುದಲ್ಲದೆ ಅರ್ಥಪುಷ್ಟಿಯೂ ಆಗುತ್ತದೆ.

ಈ ಮೇಲಣ ಏಳು ಸೂತ್ರಗಳನ್ನು ಸಂಪಾದನೆಯಲ್ಲಿ ಕಂಡುಬರುವ ಸಾಮಾನ್ಯ ವಿಷಯಕ್ಕೆ ಸಂಬಂಧಪಟ್ಟಂತೆ ಅನುಸರಿಸಬಹುದಾಗಿದೆ. ಇವೇ ಅಲ್ಲದೆ ಕೆಲವು ಗ್ರಂಥ ಸಂಪಾದನ ಶಾಸ್ತ್ರಜ್ಞರು ಪಾಠಪರಿಷ್ಕರಣ ವಿಷಯದಲ್ಲಿ ಕೆಲವು ಸಾಮಾನ್ಯ ತತ್ವಗಳನ್ನು ನಿರೂಪಿಸಿರುವುದನ್ನು ಡಿ. ಎಲ್. ನರಸಿಂಹಾಚಾರ್ಯರು ಹೀಗೆ ಸಂಗ್ರಹಿಸಿದ್ದಾರೆ.

೧) ಸುಲಭ ಪಾಠಕ್ಕಿಂತ ಕಠಿನ ಪಾಠವನ್ನು ಆರಿಸಬೇಕೆಂಬುದು ಪ್ರಧಾನ ವಾದುದಾಗಿದೆ.

೨) ಒಂದು ಸಂಪ್ರದಾಯಕ್ಕೆ ಸೇರಿದ ಯಾವುದಾದರೂ ಒಂದು ಪ್ರತಿಯ ಪಾಠ ಇನ್ನೊಂದು ಸಂಪ್ರದಾಯದ ಪ್ರತಿಯ ಪಾಠಕ್ಕೆ ಸಮಾನವಾಗಿದ್ದರೆ ಆಗ ಅದನ್ನೇ ಕವಿಪಾಠವೆಂದು ಅಂಗೀಕರಿಸಬೇಕು.

೩) ಪ್ರಧಾನ ಮಾತೃಕೆಯಿಂದ ಕವಲೊಡೆದು ಬಂದಿರುವ ಉಪಪ್ರಧಾನ ಮಾತೃಕೆಗಳ ಪುನರ್ರಚಿತ ಪಾಠದಲ್ಲಿ ಐಕ್ಯತೆಯಿದ್ದರೆ ಆ ಪಾಠವೇ ಕವಿಪಾಠ ; ಇಲ್ಲದೆಹೋದರೆ ಅವು ಭಿನ್ನಪಾಠವಾಹಕಗಳಾಗುತ್ತವೆ.

೪) ಎರಡು ಭಿನ್ನ ಸಂಪ್ರದಾಯಗಳಲ್ಲಿ ಯಾವುದು ಪ್ರಾಚೀನತಮವೋ ಅದನ್ನು ಪುರಸ್ಕರಿಸಬೇಕು. ಮೂರು ಸಂಪ್ರದಾಯಗಳಿದ್ದು ಅವುಗಳಲ್ಲಿ ಎರಡರ ಪಾಠದಲ್ಲಿ ಐಕ್ಯತೆಯಿದ್ದರೆ ಆಗ ಆ ಪಾಠ ಗ್ರಾಹ್ಯವಾಗುತ್ತದೆ.

೫) ಲಬ್ಧ ಪ್ರತಿಗಳ ಸಹಾಯದಿಂದ ಲಬ್ಧವಲ್ಲದ ಮಾತೃಕೆಯ ಪಾಠ ವನ್ನು ಪುನರ್ರಚಿಸುವಾಗಲೇ ಭಿನ್ನಪಾಠಗಳು ಹೇರಳವಾಗಿ ದೊರೆಯ ಬಹುದು ; ಮಾತೃಕೆಯ ಪಾಠಕ್ಕೆ ಇವು ಭಿನ್ನವಾಹಕಗಳಾಗುತ್ತವೆ.

ಇವುಗಳಲ್ಲಿ ಮೊದಲನೆಯ ಸೂತ್ರ ಎಲ್ಲ ಸಂಪಾದಕರೂ ಅನುಸರಿಸಬೇಕಾದ ಸಾಮಾನ್ಯ ಸೂತ್ರವಾಗಿದೆ. 'ತೊರವೆ ರಾಮಾಯಣ'ದ ಯುದ್ಧಕಾಂಡದ

ಕೆದಱಿದನು ಬಳಿಕಟ್ಟಿವಟ್ಟಿದ
ಕುದುಕುಳಿಗ ರಾವುತರ ರಣದೊಳು ೩೦–೪೪

ಎಂಬ ಪದ್ಯದಲ್ಲಿ ಬರುವ 'ಕುದುಕುಳಿಗ' ಪದವನ್ನು ಗಮನಿಸಬಹುದು. ಇದಕ್ಕೆ 'ಕುದುರೆಗಳ' ಎಂಬ ಪಾಠ ಆರು ಪ್ರತಿಗಳಲ್ಲಿ ಕಂಡುಬರುತ್ತದೆ. ಇಲ್ಲಿ 'ಕುದುರೆಗಳ' ಪಾಠ ಸುಲಭವಾಗಿ ಅರ್ಥವಾಗುವುದರಿಂದ ಕಠಿನ ಪದವಾದ 'ಕುದುಕುಳಿಗ' ಪದವನ್ನು ಬಿಟ್ಟು ಪ್ರತಿಕಾರರು ಹೀಗೆ ತಿದ್ದಿರುವುದುಂಟು. ಆದರೆ ಇಲ್ಲಿ 'ಕುದುಕುಳಿಗ' ಎಂಬ ಪದವಿರಬೇಕೇ ಹೊರತು 'ಕುದುರೆಗಳ' ಆಗಲಾರದು. ರಣರಂಗದ ರಾವುತರಿಗೆ ವಿಶೇಷಣವಾಗಿ ಬಂದಿರುವ ಈ ಪದಕ್ಕೆ ಆತುರ, ಆವೇಶ ಮೊದಲಾದ ಅರ್ಥಗಳಿರುವುದರಿಂದ ಈ ಕಠಿನ ಪದವನ್ನೇ ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ಇದೇ ಪದ ಇದೇ ಕಾಂಡದ ೩೦–೩೭ರಲ್ಲಿಯೂ ಕುದುಕುಳಿಗ, ಕುದುಕುಳಿಗ ಎಂಬ ಪಾಠಗಳೊಡನೆ ಬಂದಿರುವುದನ್ನೂ ಗಮನಿಸಬಹುದು. ಹೀಗೆಯೇ ಉಳಿದ ನಾಲ್ಕು ಸೂತ್ರಗಳೂ ಕವಿಪಾಠ ನಿರ್ಣಯದಲ್ಲಿ ತೆಗೆದುಕೊಳ್ಳಬೇಕಾದ ಮಾರ್ಗಸೂಚಿಗಳಾಗಿವೆ.

ಒಂದಕ್ಕಿಂತ ಹೆಚ್ಚು ಹಸ್ತಪ್ರತಿಗಳು ದೊರೆತಾಗ ಒಂದಲ್ಲ ಒಂದು ಪ್ರತಿಯಿಂದ ಸಹಾಯವಾಗಬಹುದು. ಈ ಎಲ್ಲದರಿಂದಲೂ ಸಾಧುವಾದ ಪಾಠ ದೊರೆಯದಾದಾಗ ಇತರ ಆಕರಗಳ ಸಹಾಯದಿಂದ ಸಂಪಾದನಾ ಕಾರ್ಯ ಮಾಡಬೇಕಾಗುತ್ತದೆ. ಇದಕ್ಕೆ ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು 'ಕರ್ಣಾಟಕ ಪಂಚತಂತ್ರ' (೧೯–೧೮) ರಲ್ಲಿ ಬರುವ 'ಖಲ್ವಾಯಿತ' ಪದವನ್ನು ವಿವಿಧ ಮೂಲಗಳಿಂದ ವಿಮರ್ಶಿಸಿ ಇದು 'ಖಲ್ವಾಯಿತ' ವಾಗಿರದೆ 'ಖಲ್ಲಾಯಿತ' ಎಂಬುದು ಸರಿಯಾದ ರೂಪವೆಂದು ನಿರ್ಣಯಿಸಿರುವುದನ್ನು ಗಮನಿಸಬಹುದು.[1]

ಏಕೈಕ ಹಸ್ತಪ್ರತಿಗಳು ದೊರೆಯುವಲ್ಲಿ ಊಹಾತ್ಮಕ ಪರಿಷ್ಕರಣ ಇಲ್ಲವೆ ಇತರೆ ಗ್ರಂಥಗಳ ಸಹಾಯ ಅಗತ್ಯವಾಗುತ್ತದೆ. ಇದು ಸಂಪಾದಕನಿಂದ ಸಂಪಾದಕನಿಗೆ ವ್ಯತ್ಯಯವಾಗುವುದುಂಟು. ಇದಕ್ಕೆ ಅವರವರ ಶಕ್ತಿ ಸಾಮರ್ಥ್ಯಗಳು ಕಾರಣವಾಗುತ್ತವೆ. ಒಬ್ಬ ಊಹಿಸಿದ ಪಾಠಕ್ಕಿಂತ ಮತ್ತೊಬ್ಬನ ಪಾಠ

1. ಹಳೆಯ ಹೊನ್ನು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೧೯೬೧

ಉತ್ತಮವಾಗಿರಬಹುದು. ಇದರಲ್ಲಿ ಪಾಠಾಂತರಗಳನ್ನು ಗುರುತಿಸುವ ಕೆಲಸವೇನೂ ಇರುವುದಿಲ್ಲ. ಆದರೆ ಪ್ರತಿಯು ತ್ರುಟಿತವಾಗಿದ್ದರೆ, ಛಂದಸ್ಸಿಗನುಗುಣವಾಗಿ ತಿದ್ದಬೇಕಿದ್ದರೆ ಸಂಪಾದಕನ ಸತ್ವಪರೀಕ್ಷೆ ನಡೆದುಹೋಗುತ್ತದೆ.

ಬಹುಕಾಲದಿಂದ ಅಲಭ್ಯವಾಗಿದ್ದು ಕೊನೆಗೂ ದೊರೆತ ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ'ದ ಏಕೈಕ ಹಸ್ತಪ್ರತಿ ಸಾಕಷ್ಟು ಶುದ್ಧವಾಗಿದ್ದರೂ ಅರೆಕೊರೆಗಳೂ ತ್ರುಟಿತ ಭಾಗಗಳೂ ಇವೆ. ಇವುಗಳನ್ನು ಆದಷ್ಟೂ ಸರಿಪಡಿಸುವುದು ಸಂಪಾದಕನ ಕರ್ತವ್ಯವಾಗಿದೆ. ಬರುವ ಸಾಮಾನ್ಯ ತಪ್ಪುಗಳನ್ನು ಸುಲಭವಾಗಿ ತಿದ್ದಬಹುದು.

**ಅಜ್ಞಾನ ಪೊಗರ್ತೆಯಿಂ ಶಾ**
**ಸ್ತ್ರಜ್ಞನೃಪಾಳಿ ಸದುಪದೇಶಮೆಂಬಂತೆ ಕರಂ ।**
**ಪ್ರಾಜ್ಞಂಗೆ ಬಗೆದು ನೋಡೆ ಮ**
**ನೋಜ್ಞಂಗೆ ಪ್ರಣಯಾನುರಾಗಮಂ ಪುಟ್ಟಿಸುಗುಂ ॥ ೧-೧೭**

ಎಂದು ಹಸ್ತಪ್ರತಿಯಲ್ಲಿರುವ ಕಂದ ಪದ್ಯದ ಎರಡು ಮತ್ತು ನಾಲ್ಕನೆಯ ಪಾದಗಳು ಛಂದಸ್ಸಿಗನುಗುಣವಾಗಿರುವುದಿಲ್ಲ. ಎರಡರಲ್ಲಿಯೂ ೨೦ ಮಾತ್ರೆಗಳಿಗೆ ಬದಲಾಗಿ ೨೧ ಮಾತ್ರೆಗಳಿದ್ದು, ಮೂರನೆಯ ಸ್ಥಾನದಲ್ಲಿ 'ಜಗಣ'ವಿಲ್ಲದಿರುವುದನ್ನು ಗಮನಿಸಬಹುದು. ಜೊತೆಗೆ ಅರ್ಥದೃಷ್ಟಿಯಿಂದಲೂ ನೋಡಿದಾಗ

**ಅಜ್ಞಾನ ಪೊಗರ್ತೆ [ಯಿಂ] ಶಾ**
**ಸ್ತ್ರಜ್ಞನೃಪಾಳಿ [ಗು] ಪದೇಶಮೆಂಬಂತೆ ಕರಂ ।**
**[ಪ್ರಾಜ್ಞರ್ಗೆ] ಬಗೆದು ನೋಡೆ ಮ**
**[ನೋಜ್ಞಂ] ಪ್ರಣಯಾನುರಾಗಮಂ ಪುಟ್ಟಿಸುಗುಂ॥**

ಎಂದು ತಿದ್ದಿ ಸರಿಪಡಿಸಬಹುದು. ಮೊದಲನೆಯ ಪಾದದಲ್ಲಿ ಮೂಲದಲ್ಲಿದ್ದಂತೆ ಪೊಗರ್ತೆಯಿಂ' ಎಂದೇ ಇದ್ದಿದ್ದರೂ ಶಿಥಿಲದ್ವಿತ್ವವಾಗಿ ಭಾವಿಸಿದರೆ ಸರಿಹೋಗುತ್ತಿದ್ದಿತು. ಆದರೆ ಅರ್ಥ ದೃಷ್ಟಿಯಿಂದ ಇಲ್ಲಿಯೂ ಸ್ವಲ್ಪ ಬದಲಾವಣೆ ಮಾಡಲಾಗಿದೆ. ಎರಡನೆಯ ಪಾದದಲ್ಲಿ ಬರುವ 'ನೃಪಾಳಿ' ಪದವನ್ನನುಸರಿಸಿ ಮೂರನೆಯ ಪಾದವನ್ನು ತಿದ್ದಲಾಗಿದೆ.

ಮತ್ತೊಂದು ಏಕೈಕ ಹಸ್ತಪ್ರತಿಯಾದ ಬೊಮ್ಮಯ್ಯನ 'ವೈದ್ಯಕಂದ' ಎಂಬ ಪದ್ಯಗ್ರಂಥದ ಹಸ್ತಪ್ರತಿಯು ತೀರಾ ಅಶುದ್ಧವಾಗಿದ್ದು, ಲೆಕ್ಕಕ್ಕೆ ಎರಡು ಪ್ರತಿಗಳು ದೊರೆತರೂ ಒಂದರ ಮರುಪ್ರತಿ ಮತ್ತೊಂದಾಗಿರುವುದರಿಂದ ಇದರ ಸಂಪಾದನಾಕಾರ್ಯ ತುಂಬಾ ಜಟಿಲವೂ ಸಮಸ್ಯಾಪೂರ್ಣವೂ ಆಗಿರುವುದನ್ನು ಉದಾಹರಣೆಯಿಂದ ತಿಳಿಯಬಹುದು. ಇದರ 'ಚಿಕಿತ್ಸಾ ವಿಭಾಗ'ದಲ್ಲಿ ಬರುವ

**ವೃತ್ತ॥** ಅಣಿಲೆಯುಂ ತಾರೆಯುಂ ನೆಲ್ಲಿಯುಂ ಸುರದಾರು ವಿಳಂಗ ಪದ್ಮರಾಸ್ಮೆಯುಂ
ಮೆಣಸು ಶುಂಠಿ ಹಿಪ್ಪಲಿ ಗೇಕಿನಗೆಡ್ಡೆಯುಂ ಸಮಭಾಗದಿಂ
ಹಣಿದು ಸಮಾನ ಸಕ್ಕರೆ ಪೊಂದಿಸಿ ಜೇನಿನತುಪ್ಪದೊಳುಣು
ದಣುವಂತೆ ಕಾಸ ಕಡೆ ಸಾರುವುದು ಪೂರ್ವದ ವೈದ್ಯಸಮ್ಮತಿಯುಂ ॥೨೮೫॥

ಇದು ವೃತ್ತ ಎಂಬುದನ್ನು ಹಸ್ತಪ್ರತಿಯಲ್ಲಿಯೇ ಸೂಚಿಸಲಾಗಿದೆ. ಮೊದಲು ಇದು ಯಾವ ವೃತ್ತಕ್ಕೆ ಸೇರಿದುದೆಂಬುದನ್ನು ಗೊತ್ತುಮಾಡಬೇಕು. ಮೊದಲನೆಯ ಆದಿಯಲ್ಲಿ ನಾಲ್ಕು ಲಘುಗಳಿರುವುದರಿಂದ 'ಲಘು ನಾಲ್ಕಾಗಿರಲಂತು ಚಂಪಕ' ಎಂಬುದನ್ನನುಸರಿಸಿ ಇದು ಚಂಪಕಮಾಲಾ ವೃತ್ತಕ್ಕೆ ಸರಿಹೋದುವುದೇ ಎಂದು ಪರಿಶೀಲಿಸಬೇಕಾಗುತ್ತದೆ. ಮುಂದೆ 'ನಜಭಜಜಂಜರಂ ಬಗೆಗೊಳುತ್ತಿರೆ ಚಂಪಕಮಾಲೆ ಪುಟ್ಟುಗುಂ' ಎಂಬ ಸೂತ್ರದಂತೆ ಗಣಗಳನ್ನು ಹೊಂದಿಸಿ ನೋಡಿದರೆ, ಕೆಲವು ಅಕ್ಷರಗಳನ್ನು ತಿದ್ದಿ, ಸೇರಿಸಿ ಸರಿಪಡಿಸಬೇಕಾದುದು ತಿಳಿಯುತ್ತದೆ. ಅಂತೆಯೇ ಎಲ್ಲ ಪಾದಗಳನ್ನೂ ನೋಡಿ ಅರ್ಥವ್ಯಾಪ್ತಿಗೆ ಕುಂದುಂಟಾಗದಂತೆ ವಿವಿಧ ಮೂಲಗಳಿಂದ ಪರಿಶೀಲಿಸಿ ತಿದ್ದಿದಾಗ

**ಚಂಪಕ॥** ಅಣಿಲೆಯುಂ ತಾರೆ 1[ನೆಲ್ಲಿ]1 ಸುರದಾರು ವಿಳಂಗ [ವು] ಪದ್ಮರಾಸ್ಮೆಯುಂ
ಮೆಣ 2[ಸನು]2 ಶುಂಠಿ ಹಿಪ್ಪಲಿ [ಯು]ಗೇಕಿನ ಗೆಡ್ಡೆಯುಂ 3[ಸಾಮ್ಯ]3 ಭಾಗದಿಂ
ಹಣಿದು ಸಮಾನ ಸಕ್ಕರೆ [ಯು] ಪೊಂದಿಸಿ ಜೇನಿನ ತುಪ್ಪ 4[ದಿಂದುಣಲ್
ಮಣಿ]4 ದಣುವಂತೆ ಕಾಸ ಕಡೆಸಾರು 5[ಗು]5 ಪೂರ್ವದ ವೈದ್ಯಸಮ್ಮ 6[ತಂ]6

1 ಯುಂ ನೆಲ್ಲಿಯುಂ (ಕಗ) 2 ಸು (ಕಗ) 3 ಸಮ (ಕಗ) 4 ದೊಳುಣು (ಕಗ)
5 ವುದು (ಕಗ) 6 ತಿಯುಂ (ಕಗ)



ಎಂದು ರೂಪು ಪಡೆಯುತ್ತದೆ. ಇದರಿಂದ ಮೂಲಾರ್ಥಕ್ಕೆ ಯಾವ ಕುಂದೂ ಉಂಟಾಗುವುದಿಲ್ಲ ; ಛಂದಸ್ಸಿಗೆ ಅನುಗುಣವಾಗಿದೆ. ಹೀಗೆ ತಿದ್ದಿದ ಮೇಲೆ ನೋಡುವವರಿಗೆ ಬಹಳ ಸುಲಭದ ಕೆಲಸವಾಗಿ ತೋರಬಹುದು. ಆದರೆ ಅದನ್ನು ಸರಿಪಡಿಸುವಾಗ ಅನುಭವಿಸುವ ಮಾನಸಿಕ ತೊಳಲಾಟ, ವೇಳೆಯ ವ್ಯಯ, ಬೇಕಾದ ಮನಸ್ಸಿನ ತಾಳ್ಮೆಗಳು ಎಷ್ಟೆಂಬುದು ಈ ಕೆಲಸ ಮಾಡಿದವರಿಗೆ ಮಾತ್ರ ಅರ್ಥವಾಗುವಂತಹದು. ಇಲ್ಲಿ ಕಂಸದಲ್ಲಿ ಕೊಟ್ಟಿರುವ ಪಾಠಗಳಿಗೆ ಮೂಲದಲ್ಲಿರುವುದನ್ನು ಪಾಠಾಂತರಗಳಾಗಿ ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ. ಮತ್ತೊಬ್ಬರು ಇದಕ್ಕಿಂತಲೂ ಉತ್ತಮ ಪಾಠಗಳಿಂದ ತಿದ್ದಲು ಸಮರ್ಥರಾಗಬಹುದು ; ಈ ಪಾಠಾಂತರಗಳು ಅದಕ್ಕೆ ಸಹಕಾರಿಯಾಗಿ ನಿಲ್ಲುತ್ತವೆ. 

ಇಲ್ಲಿ ಒದಗಿಸಿರುವ ಎಲ್ಲ ಪಾಠಗಳೂ ಸಂಪಾದಕನಿಂದಾದುದರಿಂದ ಎಲ್ಲವನ್ನೂ ಸಂಪಾದನಾ ನಿಯಮಕ್ಕನುಸಾರವಾಗಿ ಕಂಸಗಳಲ್ಲಿ ಕೊಡಲಾಗಿದೆ ; ಕೆಲವು ಕಂಸದಲ್ಲಿನ ಪಾಠಗಳಿಗೆ ಪಾಠಾಂತರಗಳನ್ನು ಕೊಟ್ಟು ಕೆಲವಕ್ಕೆ ಕೊಟ್ಟಿರುವುದಿಲ್ಲ. ಇದಕ್ಕೆ ಕಾರಣ ಮೂಲಪಾಠಕ್ಕೆ ಬದಲಾಗಿ ಕೊಟ್ಟಿರುವ ಪಾಠಗಳಿಗೆ ಮೂಲಪಾಠವನ್ನು ಪಾಠಾಂತರವಾಗಿ ಕೊಡಬೇಕಾದುದು ಸಹಜವಾಗಿದೆ. ಹಾಗೆಯೇ ಛಂದಸ್ಸಂಪೂರ್ಣತೆಗಾಗಿ ಇಲ್ಲವೆ ಅರ್ಥಪುಷ್ಟಿಗಾಗಿ ಹೊಸದಾಗಿ ಸೇರಿಸಿದವುಗಳಿಗೆ ಪಾಠಾಂತರಗಳೇ ಇಲ್ಲದುದರಿಂದ ಇವುಗಳಿಗೆ ಪಾಠಾಂತರಗಳನ್ನು ಕೊಟ್ಟಿರುವುದಿಲ್ಲ ; ಇದು ಅಗತ್ಯವಾಗಿ ಕಂಡುಬರುವುದಿಲ್ಲ. ಒಂದು ವೇಳೆ ಕೊಡಲೇಬೇಕೆಂದು ಯಾರಾದರೂ ಬಯಸಿದಲ್ಲಿ 'ವಿಳಂಗ[ವು]' ಎನ್ನುವಲ್ಲಿ 'ವಿಳಂ[ಗವು]' ಎಂದು ನಮೂದಿಸಿ 'ಗ' ಎಂಬುದನ್ನು ಪಾಠಾಂತರವಾಗಿ ಕೊಡಬಹುದು. ಇದರಲ್ಲಿ ಉಪಯೋಗಿಸಿರುವ ಎರಡು ಪ್ರತಿಗಳು ಪ್ರತಿ ಮರುಪ್ರತಿಗಳಾದರೂ ಕೆಲವೆಡೆ ಲಿಪಿಕಾರರ ದೋಷದಿಂದಲೊ ಏನೊ ಪಾಠವ್ಯತ್ಯಾಸ ಕಂಡುಬರುವುದರಿಂದ ಎರಡು ಪ್ರತಿಗಳಿಗೂ ಸಂಕೇತಗಳನ್ನು ನೀಡಲಾಗಿದೆ.

ಇಲ್ಲಿ ಹೇಳಬೇಕಾದ ಮತ್ತೊಂದು ಅಂಶವೆಂದರೆ ಪಾಠಾಂತರ ಪ್ರತಿಗಳ ಸಂಕೇತಗಳನ್ನು ನೀಡುವುದು. ಏಕೈಕ ಹಸ್ತಪ್ರತಿಯಾದರೆ ಮೂಲದಲ್ಲಿದ್ದುದನ್ನು ಪಾಠಾಂತರವಾಗಿ ಕೊಟ್ಟಾಗ ಯಾವುದೇ ಸಂಕೇತ ಬೇಕಾಗುವುದಿಲ್ಲ. ಆದರೆ ಒಂದಕ್ಕಿಂತ ಹೆಚ್ಚು ಪ್ರತಿಗಳ ಉಪಯೋಗವಾದಾಗ, 'ಕ ಖ ಗ ಚ' ಎಂಬ ನಾಲ್ಕು ಪ್ರತಿಗಳಿದ್ದಲ್ಲಿ ಕೆಲವೆಡೆ ಒಂದೊ ಎರಡೊ ಮೂರೊ ಪಾಠಗಳನ್ನು ಪಾಠಾಂತರ

ವಾಗಿ ಕೊಡಬೇಕಾಗುತ್ತದೆ. ಪಾಠಗಳು ಬೇರೆ ಬೇರೆಯಾಗಿದ್ದಾಗ ಬೇರೆ ಬೇರೆ ಪಾಠಗಳೊಡನೆ ಆಯಾ ಪ್ರತಿಯ ಸಂಕೇತವನ್ನು ಬೇರೆ ಬೇರೆ ಕಂಸಗಳಲ್ಲಿ ನಮೂದಿಸಬೇಕಾಗುತ್ತದೆ ; ಎರಡು ಅಥವಾ ಮೂರು ಪ್ರತಿಗಳ ಪಾಠವೂ ಒಂದೇ ಇದ್ದಾಗ, 'ಕ' ಪ್ರತಿಯ ಪಾಠ ಮೂಲದಲ್ಲಿ ಉಳಿದಾಗ 'ಖಗಚ' ಪ್ರತಿಗಳ ಪಾಠವನ್ನು ಪಾಠಾಂತರವಾಗಿ ಕೊಟ್ಟು ಮೂರು ಸಂಕೇತಗಳನ್ನೂ ಒಟ್ಟಿಗೆ ಒಂದೇ ಕಂಸದಲ್ಲಿ (ಖಗಚ) ಎಂಬಂತೆ ಕೊಡುವುದರಿಂದ ಯಾವ ಬಾಧಕವೂ ಆಗುವುದಿಲ್ಲ. ಕೆಲವು ಸಂಪಾದಕರು ಈ ಸಂಕೇತಗಳನ್ನು ಒಂದೇ ಪಾಠಕ್ಕೆ (ಖ) (ಗ) (ಚ) ಎಂಬಂತೆ ನೀಡಿರುವುದುಂಟು. ಇದರಿಂದ ಯಾವ ಹೆಚ್ಚುವರಿ ಸಹಾಯವೂ ಆದಂತಾಗುವುದಿಲ್ಲ. ಹತ್ತು ಪ್ರತಿಗಳಿದ್ದಾಗ ಒಂದನ್ನು ಸ್ವೀಕರಿಸಿ ಉಳಿದವನ್ನು ಕೊಡಬೇಕಾದಾಗ, ಒಂಬತ್ತರಲ್ಲಿಯೂ ಒಂದೇ ಪಾಠ ವಿದ್ದಲ್ಲಿ ಒಂಬತ್ತು ಸಂಕೇತಗಳಿಗೆ ಒಂಬತ್ತು ಕಂಸಗಳನ್ನು ಉಪಯೋಗಿಸ ಬೇಕಾಗುತ್ತದೆ. ಇದರಿಂದ ಕಾಗದ ವೇಳೆ ಪುಸ್ತಕದ ವೆಚ್ಚ ಹೆಚ್ಚುವುದೆಂಬುದನ್ನು ಗಮನಿಸಬೇಕು.

ಒಂದು ಗ್ರಂಥದ ಎರಡು ಪ್ರತಿಗಳು ಪ್ರತಿ ಮರುಪ್ರತಿಗಳಾಗಿ ಕಂಡರೂ ಕೆಲವೆಡೆ ಪಾಠವ್ಯತ್ಯಾಸ ಕಂಡುಬಂದು ಅದರಿಂದ ಸಂಪಾದನಾ ಕಾರ್ಯಕ್ಕೆ ಅನುಕೂಲವಾಗುವಂತಹ ಸನ್ನಿವೇಶಗಳೂ ಉಂಟಾಗುತ್ತವೆ. 'ವೈದ್ಯಕಂದ'ದ ಚಿಕಿತ್ಸಾ ವಿಭಾಗದ ಕಾಗದದ ಪ್ರತಿಯಲ್ಲಿ

**ಮೂವಣಿಲೆಯಕಾಯ್ ರಸದೊಳು**
**ಸೇರಿಸಿ ಘೃತ ನಾಲ್ಕು ನಾಲ್ಕನೆಯ ಧಾರಣೆಗೈ**
**ದೊಡನಿಡು ವಾರಣದಿಂ**
**ತುಪ್ಪ ನಿಲಲದು ಕಾಮುಲೆಗಂ** **೩೧೯**

ಎಂದಿದ್ದರೆ ಓಲೆಯ ಪ್ರತಿಯಲ್ಲಿ

**ಮೂವಣಿಲೆಯ ರಸವ ಸೇರಿ**
**ಸುವುದು ಘೃತ ನಾಲ್ಕು ಧಾರಣೆ**
**ಗೈವೋರಣದಿಂ ತುಪ್ಪವುಳಿ**
**ಘುನ ತೆರ ಕಾಸಿಟ್ಟ ಘೃತದಿ ಕಾವಮಾಲೆಹರಂ** **೩೧೯**

ಂದಿದೆ. ಎರಡು ಪ್ರತಿಗಳಲ್ಲಿಯೂ ತಪ್ಪು ಉಳಿದಿವೆ. ಆದುದರಿಂದ ಎ
ರಡೂ ಪ್ರತಿಗಳ ಸಹಾಯದಿಂದ

ಮಾವಣಿಲೆಯ ರಸವ ಸೇರಿ
[ಸೀವುದು] ಘೃತ ನಾಲ್ಕು [ನಾಲ್ಕು ಭಾಗವ] ಧಾರಣೆ
ಗೈಮೋರ [ಣದಿ] ತುಪ್ಪವುಳಿ
ಯುವ ತೆರ ಕಾಸಿಟ್ಟ ಘೃತದಿ ಕಾಮಾಲೆಹರಂ ೩೧೯

ಂದು ತಿದ್ದಿ ಸರಿಪಡಿಸಬಹುದು. ಒಂದು ಪ್ರತಿಯಿಂದ ಮತ್ತೊಂದು ತಿಯಾಗುವಾಗ ಪ್ರತಿಕಾರನೆ ಕೆಲವೆಡೆ ತಿದ್ದಿದ್ದಾನೊ ಎನೊ ಹೇಳಲು ಸಾಧ್ಯ ಗುವುದಿಲ್ಲ. ಇಲ್ಲಿ ಓಲೆಯ ಪ್ರತಿ ಮೂಲವಾಗಿದ್ದು ಕಾಗದದ್ದು ಅದರ ರುಪ್ರತಿ ಎಂದು ಭಾವಿಸಬಹುದು.

ಹೀಗೆ ಗ್ರಂಥಗಳನ್ನು ಸಂಪಾದಿಸುವಾಗ ಆಯಾಯ ಸಂದರ್ಭಕ್ಕನುಸಾರ ಗಿ ಸೂಚಿಸುವ ಕೆಲವು ಚಿಹ್ನೆಗಳನ್ನು ಸಂಪಾದಕರು ಬಳಸುತ್ತಾರೆ. ಅವುಗಳಲ್ಲಿ

೧. ಮೂಲಪಾಠವನ್ನು ಬದಲಿಸಿ ಸ್ವಂತ ಪಾಠವನ್ನು ಇಲ್ಲವೆ ಹೊಸದಾಗಿ ರಿಸಿದ ಪಾಠವನ್ನು ಕೊಡುವಾಗ [ ] ಎಂಬ ಚೌಕಕಂಸದಲ್ಲಿ ಕೊಟ್ಟು ಊಲಪಾಠವಿದ್ದಲ್ಲಿ ಅದನ್ನು ಪಾಠಾಂತರವಾಗಿ ನಮೂದಿಸಬೇಕು.

೨. ಮೂಲವನ್ನು ತಿದ್ದುವುದು ಸಾಧ್ಯವಿಲ್ಲದಾಗ, ಇಂತಿರಬಹುದೆಂದು ಹೆ ಮಾಡಿದ ಪಾಠವನ್ನು ಚೌಕ ಕಂಸದಲ್ಲಿ ಪ್ರಶ್ನಾರ್ಥ ಚಿಹ್ನೆಯೊಡನೆ [ ]? ಬಂತೆ ಅಡಿ ಟಿಪ್ಪಣಿಯಲ್ಲಿ ನಮೂದಿಸಬೇಕು.

೩. ಯಾವುದೇ ಒಂದು ಪದ ಪಾದ ಅರ್ಥವಾಗದಿದ್ದಾಗ, ಛಂದಸ್ಸಿನ ೋಷ ಉಂಟಾದಾಗ ಆ ಪದ ಪಾದ ಅಥವಾ ಒಟ್ಟು ಪದ್ಯಕ್ಕೆ ಪ್ರಶ್ನಾರ್ಥಕ ಹ್ನೆ (?) ಯನ್ನು ಹಾಕುವುದು ರೂಢಿಯಲ್ಲಿದೆ.

೪. ಮಾತೃಕೆಗಳಲ್ಲಿ ಗ್ರಂಥಪಾತವಾಗಿದ್ದು, ಅದನ್ನು ಸಂಪಾದಕರು ಂಬಲು ಸಾಧ್ಯವಾಗದಿದ್ದಲ್ಲಿ ಆ ಭಾಗವನ್ನು ಗುಣಿತದ × × × ಈ ಚಿಹ್ನೆ ಳನ್ನು ಉಪಯೋಗಿಸುವುದುಂಟು. ಇದೇ ಕ್ರಮವನ್ನು ಪಾಠಾಂತರಗಳಿಗೂ ನುಸರಿಸಬೇಕು.

೫. ಪಾಠಾಂತರಗಳನ್ನು ನೀಡುವಾಗ ಮೊದಲನೆಯ ಪಾಠಕ್ಕೆ ಸಮಾನಾಂತರವಾಗಿರುವ ಮುಂದಣ ಪಾಠಾಂತರದ ಭಾಗಕ್ಕೆ... ಈ ಚಿಹ್ನೆಗಳನ್ನು ಉಪಯೋಗಿಸಬಹುದು.

೬. ಒಂದು ಶಬ್ದರೂಪದಿಂದ ಮತ್ತೊಂದು ಶಬ್ದದ ರೂಪವಾಗಿದೆ ಯೆಂಬುದನ್ನು > ಈ ಚಿಹ್ನೆಯೊಡನೆಯೂ, ಬಂದಿರುವ ಶಬ್ದಕ್ಕೆ ಮತ್ತೊಂದು ಮೂಲವೆಂಬುದನ್ನು ತೋರಿಸಲು < ಈ ಚಿಹ್ನೆಯನ್ನೂ ಬಳಸುತ್ತಾರೆ.

೭. ಯಾವುದಾದರೂ ಭಾಗವನ್ನು ಪ್ರಕ್ಷಿಪ್ತವೆಂದು ತೀರ್ಮಾನಿಸಿದರೆ, ಅವು ಕೆಲವೇ ಸಾಲುಗಳಾಗಿದ್ದರೆ ಅಡಿಟಿಪ್ಪಣಿಯಲ್ಲಿಯೂ, ಹೆಚ್ಚು ಭಾಗವಿದ್ದಲ್ಲಿ ಗ್ರಂಥದ ಕೊನೆಯಲ್ಲಿ ಪರಿಶಿಷ್ಟವಾಗಿಯೂ, ಕೊಡುವುದುಂಟು. ಇದನ್ನು ಆಯಾ ಸ್ಥಳದಲ್ಲಿ ಸೂಕ್ತ ಚಿಹ್ನೆಯೊಡನೆ, ಎಂದರೆ ಕಠಾರಿ + ಚಿಹ್ನೆಯಿಂದ ಗುರುತಿಸುವುದುಂಟು. ಇದಕ್ಕೆ ಬದಲಾಗಿ ನಕ್ಷತ್ರ ಮತ್ತಿತರ ಚಿಹ್ನೆಗಳನ್ನೂ ಬಳಸಿರುವುದನ್ನು ಕಾಣಬಹುದು. ಇಂತಹ ಭಾಗಗಳು ಒಂದೇ ಪುಟದಲ್ಲಿ ಒಂದಕ್ಕಿಂತ ಹೆಚ್ಚಿದ್ದರೆ ಸಂದರ್ಭಕ್ಕೆ ತಕ್ಕಂತೆ ಹೆಚ್ಚು ಹೆಚ್ಚು ಚಿಹ್ನೆಗಳನ್ನು ಬಳಸಬೇಕಾಗುತ್ತದೆ.

ಪ್ರೊ. ತೀ. ನಂ. ಶ್ರೀಕಂಠಯ್ಯನವರು ತಮ್ಮ ಸಂಪಾದಿತ ಗ್ರಂಥಗಳಲ್ಲಿ ಉಪಯೋಗಿಸಿರುವ ಮತ್ತೆರಡು ಚಿಹ್ನೆಗಳನ್ನು ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ಉದ್ಧರಿಸಿದ್ದಾರೆ.[1] ಅವೆಂದರೆ

೧. ಸಮಾಸಗಳ ಒಂದು ಭಾಗವನ್ನು ಪ್ರತ್ಯೇಕಿಸಿ ಟಿಪ್ಪಣಿಗಳಲ್ಲಿ ಉದ್ಧರಿಸುವುದನ್ನು ತೋರಿಸುವ ಚಿಹ್ನೆ : ⊙

೨. ಎರಡು ಅಥವಾ ಹಲವು ಮಾತೃಕೆಗಳ ಪಾಠಾಂತರಗಳಿರುವ ಅಲ್ಪ ಭೇದವನ್ನು ಗಮನಿಸಿಲ್ಲ ಎಂಬುದನ್ನು ತೋರಿಸುವ ಚಿಹ್ನೆ : ∴

ಸಂಪಾದಿತ ಗ್ರಂಥಗಳಲ್ಲಿ ಉಪಯೋಗಿಸಿರುವ ಈ ಚಿಹ್ನೆಗಳು ಸೀಮಿತ ಪರಿಮಿತಿಯಲ್ಲಿರುವುದರಿಂದ ಇವುಗಳನ್ನು ಸುಲಭವಾಗಿ ಎಲ್ಲರೂ ಬಳಸಬಹುದಾಗಿದೆ.

---

1. ಕನ್ನಡ ಗ್ರಂಥ ಸಂಪಾದನೆ ಪು. ೨೧೫

ಕೊನೆಯದಾಗಿ ಸಂಪಾದಿತ ಗ್ರಂಥಕ್ಕೆ ಆಯಾ ಗ್ರಂಥ ವಿಷಯವನ್ನನುಸರಿಸಿ ಅರ್ಥಕೋಶ, ಪಾರಿಭಾಷಿಕ ಪದಕೋಶ, ಪದ್ಯಗಳ ಅಕಾರಾದಿ, ಅಂಕಿತನಾಮಗಳ ಪಟ್ಟಿ ಮೊದಲಾದುವನ್ನು ಒದಗಿಸುವುದಲ್ಲದೆ ಕವಿ–ಕಾವ್ಯಗಳ ಅಥವಾ ಕೃತಿ ಕರ್ತೃಗಳ ವಿಷಯವನ್ನೂ, ಕಥಾಸಾರ ಗ್ರಂಥವಿಮರ್ಶೆ ಮೊದಲಾದುವುಗಳನ್ನೂ ಓದುಗರಿಗೆ ಗ್ರಂಥದ ಬಗೆಗೆ ಪೂರ್ಣ ತಿಳುವಳಿಕೆ ಮೂಡುವಂತೆ ಒದಗಿಸಬೇಕಾದುದು ಆವಶ್ಯಕ. ಉಪಯೋಗಿಸಿದ ಹಸ್ತಪ್ರತಿಗಳ ವಿವರವನ್ನು ಒದಗಿಸುವುದು ಎಲ್ಲಕ್ಕಿಂತ ಮುಖ್ಯ ಕೆಲಸವಾಗಿದೆ. ಪ್ರತಿಗಳು ದೊರೆತ ಸ್ಥಳ, ಅವುಗಳ ಶುದ್ಧಾಶುದ್ಧತೆ, ಐ ಟಿ ಮೊದಲಾದುವುಗಳ ಉಪಯೋಗ, ಪ್ರತಿಗಳ ಪೀಳಿಗೆ ಮೊದಲಾದುವನ್ನು ನೀಡುವುದು ಅತ್ಯಗತ್ಯ. ಅದರಿಂದ ಮುಂದೆ ಈ ಕೆಲಸ ಮುಂದುವರಿಸುವವರಿಗೆ ಅನುಕೂಲವಾಗುತ್ತದೆ. ಯಾವುದೇ ಒಂದು ಗ್ರಂಥವನ್ನು ಒಂದು ಸಲ ಸಂಪಾದಿಸಿ ಪ್ರಕಟಿಸಿದರೆ ಸಾಲದು ; ಅದು ಮತ್ತೆ ಮತ್ತೆ ಅದರ ಉಪಯುಕ್ತತೆಯ ಮೇಲೆ ಮುದ್ರಣವಾಗಬೇಕಾಗುತ್ತದೆ ; ಮರುಪರಿಶೀಲನೆ ನಡೆಯಬೇಕಾಗುತ್ತದೆ. ಉಪಯೋಗಿಸಿರುವ ಹಸ್ತಪ್ರತಿಗಳ ವಿವರವಿರುವುದರಿಂದ ಹೊಸ ಪ್ರತಿಗಳೇನಾದರೂ ದೊರೆತಲ್ಲಿ ಅದನ್ನು ಗುರುತಿಸಲು ಸಾಧ್ಯವಾಗುತ್ತದೆ. ಇಲ್ಲವೆ ಯಾವುದಾದರೂ ಸಮಸ್ಯೆಯಿದ್ದರೆ ಅದನ್ನು ಬಿಡಿಸಲು ಉಪಯೋಗಿಸಿದ ಹಸ್ತಪ್ರತಿಗಳನ್ನು ಮತ್ತೊಬ್ಬರು ಪರಿಶೀಲಿಸಲು ಸಹಾಯವಾಗುತ್ತದೆ.

ಹಸ್ತಪ್ರತಿಯ ವಿವರವನ್ನು ನೀಡುವಾಗ ಪತ್ರ ಅಥವಾ ಪುಟಸಂಖ್ಯೆ, ಓಲೆ ಕಾಗದ ಅಥವಾ ಮತ್ತಾವುದೇ ವಸ್ತು, ಬರೆದಿರುವ ಸಾಲುಗಳು, ಸಾಲಿನಲ್ಲಿನ ಅಕ್ಷರಗಳು, ಲುಪ್ತ ಅಥವಾ ಮುರಿದ ಪತ್ರಗಳ ವಿವರ, ಬರವಣಿಗೆಯ ಸ್ವರೂಪ ಮೊದಲಾದೆಲ್ಲ ವಿವರಗಳನ್ನು ಅಗತ್ಯವಾಗಿ ನೀಡಬೇಕು. ಪತ್ರ ಪಂಕ್ತಿ ಅಕ್ಷರ ಸಂಖ್ಯೆಯನ್ನು ನೀಡುವುದರಿಂದ ಗ್ರಂಥ ಸಂಖ್ಯೆಯನ್ನು ನಿರ್ಧರಿಸಿ ಗ್ರಂಥದ ವಿಸ್ತಾರವನ್ನು ತಿಳಿಯಬಹುದು. ಕೆಲವು ಗ್ರಂಥಗಳಿಗೆ ಗ್ರಂಥಸಂಖ್ಯೆಯನ್ನು ಕೊಟ್ಟಿರುವುದನ್ನು 'ರಾಜಾವಳಿ ಕಥಾಸಾರ'ದಲ್ಲಿ ಬರುವ "ಉಪರಿಮ ನಿಬಂಧನಾದ್ಯಧಿಕಾರಮಷ್ಟಾದಶದೆಪ್ಪತ್ತೆರಡು ಸಾಸಿರ ಗ್ರಂಥರಚನಾ ಪ್ರಾಕೃತ ಸಂಸ್ಕೃತ ಮಿಶ್ರಟೀಕು ಬರೆದು 'ಧವಲ'ಮೆಂದು" (ಪು. ೧೫೧) "ತ್ರಿಷಷ್ಟಿ ಲಕ್ಷಣ ಮಹಾಪುರಾಣಂ ದ್ವಾದಶ ಸಹಸ್ರ ಗ್ರಂಥ

ಪ್ರಮಾಣದಿಂ ರಚಿಸಲೆಂದು" (ಪು. ೧೫೨)[1] ಮೊದಲಾದ ಹೇಳಿಕೆಗಳಲ್ಲಿ ಗಮನಿಸಬಹುದು.

ಈ ಗ್ರಂಥಸಂಖ್ಯೆಯನ್ನು ತಿಳಿಯುವುದು ಹೇಗೆಂಬ ಬಗೆಗೆ ಕೆಲವರಿಗೆ ಅರಿವಿರಲಾರದು. ಪತ್ರ ಅಥವಾ ಪುಟಸಂಖ್ಯೆ × ಪಂಕ್ತಿಗಳು × ಅಕ್ಷರಗಳು ÷ ೧೬ ಅಥವಾ ೩೨ = ಗ್ರಂಥಸಂಖ್ಯೆ. ಇದನ್ನು ಒಂದು ಉದಾಹರಣೆಯ ಮೂಲಕ ತೋರಿಸಬಹುದು. ಒಂದು ಗ್ರಂಥದಲ್ಲಿ ೧೦೦ ಓಲೆಗಳಿದ್ದು, ಪತ್ರದ ಒಂದು ಪಕ್ಕದಲ್ಲಿ ಸರಾಸರಿ ೧೦ ಸಾಲುಗಳೂ, ಒಂದು ಸಾಲಿನಲ್ಲಿ ಸರಾಸರಿ ೪೫ ಅಕ್ಷರಗಳೂ ಇವೆ ಎಂದಿಟ್ಟುಕೊಂಡರೆ, ೧೦೦ × ೧೦ × ೪೫ = ೪೫,೦೦೦ ಆಗುತ್ತದೆ. ಪತ್ರದ ಒಂದು ಪಕ್ಕದಲ್ಲಿ ಮಾತ್ರ ಪತ್ರಸಂಖ್ಯೆಯಿದ್ದು ಎರಡೂ ಪಕ್ಕಗಳಲ್ಲಿ ಬರವಣಿಗೆಯಿದ್ದರೆ ೪೫,೦೦೦ × ೨ = ೯೦,೦೦೦ ಆಗುತ್ತದೆ. ೩೨ ಅಕ್ಷರಗಳಿಗೆ ಒಂದು ಗ್ರಂಥಸಂಖ್ಯೆಯಾದುದರಿಂದ ೯೦,೦೦೦ ವನ್ನು ೩೨ರಿಂದ ಇಲ್ಲವೆ ೪೫,೦೦೦ ವನ್ನು ೧೬ ರಿಂದ ಭಾಗಿಸಬಹುದು. ಆಗ ೨೮೧೨ ಅಥವಾ ೨೮೦೦ ಗ್ರಂಥಸಂಖ್ಯೆಯಾಗುತ್ತದೆ. ಪತ್ರದ ಒಂದು ಕಡೆ ಮಾತ್ರ ಬರವಣಿಗೆಯಿದ್ದಲ್ಲಿ ಅಥವಾ ಎರಡೂ ಕಡೆ ಬರವಣಿಗೆಯಿದ್ದು ಪುಟಸಂಖ್ಯೆಯಿದ್ದಲ್ಲಿ ೩೨ ರಿಂದಲೇ ಭಾಗಿಸಬೇಕಾಗುತ್ತದೆ.

ಸಂಪಾದಕರು ಯಾರೇ ಆಗಲಿ ಇದುವರೆಗೆ ಹಸ್ತಪ್ರತಿಯಲ್ಲಿಯೇ ಉಳಿದಿರುವ ಕೃತಿಗಳ ಕಡೆಗೆ ಗಮನ ಹರಿಸಬೇಕು. ದೊರೆಯುವ ಪ್ರತಿ ಶುದ್ಧವಿರಬಹುದು ಇಲ್ಲದಿರಬಹುದು, ಏಕೈಕ ಪ್ರತಿಯಾಗಿರಬಹುದು ; ದೊರೆತ ಹೆಚ್ಚು ಪ್ರತಿಗಳೆಲ್ಲವರಿಂದಲೂ ಸಂಪಾದನಾ ಕಾರ್ಯ ಕಷ್ಟವಾಗಬಹುದು. ಇಂತಹವನ್ನು ಅರೆಕೊರೆಗಳುಳಿಯುತ್ತವೆಂದಾಗಲಿ ಸರಿಯಾದ ರೂಪ ಕೊಡಲು ಸಾಧ್ಯವಿಲ್ಲವೆಂದಾಗಲಿ ಬಿಟ್ಟಿರುವುದು ಸಾಧುವಲ್ಲ. ದೊರೆತ ಒಂದು ಪ್ರತಿಯನ್ನೇ ಉಪಯೋಗಿಸಿ 'ಕರ್ಣಾಟಕ ಕಾದಂಬರಿ' ಸಂಪಾದನಾ ಕಾರ್ಯವನ್ನು ಕೈಗೊಂಡು ಯಶಸ್ವಿಯಾದ ಬಿ. ಮಲ್ಲಪ್ಪನವರನ್ನು ಈಗ ನೆನೆಯುವವರು ಹಲವರಿದ್ದಾರೆ. ಎಸ್. ಜಿ. ನರಸಿಂಹಾಚಾರ್ಯ, ರಾಮಾನುಜಯ್ಯಂಗಾರ್, ಫ. ಗು. ಹಳಕಟ್ಟಿ

---

1. ರಾಜಾವಳಿ ಕಥಾಸಾರ : ಸಂ. ಬಿ. ಎಸ್. ಸಣ್ಣಯ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೮೮.

ಮುಂತಾದವರು ನಮ್ಮ ಮುಂದಿದ್ದಾರೆ. ಪಂಡಿತ ಎಚ್. ಶೇಷಯ್ಯಂಗಾರ್ ಅವರು ಮದರಾಸಿನಿಂದ ಅಪೂರ್ವವಾದ ಕನ್ನಡ ಗ್ರಂಥಗಳು ಪ್ರಕಟವಾಗಲು ಕಾರಣರಾದುದನ್ನು ನೆನಪಿನಲ್ಲಿಟ್ಟಿದ್ದೇವೆ. ಕಳಲೆ ವೀರರಾಜೇಂದ್ರನ 'ಸಕಲ ವೈದ್ಯ ಸಂಹಿತಾಸಾರಾರ್ಣವ'ದ ಮೊದಲ ಸಂಪುಟ ೧೯೩೨ರಲ್ಲಿಯೇ ಪ್ರಕಟವಾಗಿ, ಅದರ ಮರುಮುದ್ರಣವಾದರೂ ಎರಡನೆಯ ಸಂಪುಟ ಪ್ರಕಟವಾಗದಿದ್ದುದು ಹಸ್ತಪ್ರತಿಯ ಕಠಿಣ ಸ್ವರೂಪದಿಂದ, ಇದರ ಪ್ರಕಟಣೆಗೆ ೧೯೮೮ರವರೆಗೂ ಕಾಯ ಬೇಕಾಯಿತು. ಬಂಧುವರ್ಮನ 'ಹರಿವಂಶಾಭ್ಯುದಯ'ದ ಏಕೈಕ ಹಸ್ತ ಪ್ರತಿ ಸಂಸ್ಥೆಯ ಳನೆಯ ಹಸ್ತಪ್ರತಿಯಾಗಿ ಬಂದರೂ ಅದರ ಬಿಡುಗಡೆ ೧೯೭೩ರ ವರೆಗೂ ಸಾಧ್ಯವಾಗದಾಯಿತು. ಜಗದ್ದಳ ಸೋಮನಾಥನ 'ಕರ್ಣಾಟಕ ಕಲ್ಯಾಣ ಕಾರಕ'ವೆಂಬ ವೈದ್ಯಗ್ರಂಥವು ಅತ್ಯಂತ ಕಠಿನ ಪರಿಸ್ಥಿತಿಯನ್ನೆದುರಿಸಿ ಸಂಪಾದಿತ ವಾಗಿ ಪ್ರಕಟಣೆಗಾಗಿ ಇನ್ನೂ ಕಾಯುತ್ತಲೇ ಇದೆ. ನೀತಿಯುತವಾದ ಅಪಾರ ವಾಗಿ ಕಂಡುಬರುವ 'ಶತಕ ಸಾಹಿತ್ಯ'ದ ಬಹುಭಾಗ ಇನ್ನೂ ಅಪ್ರಕಟಿತವಾಗಿಯೇ ಉಳಿದಿದೆ. ಕನ್ನಡ ಟೀಕನ್ನೊಳಗೊಂಡ ಸಂಸ್ಕೃತ ಮತ್ತು ವೈದ್ಯ ಗ್ರಂಥಗಳೇ ಮೊದಲಾದುವು ಸಂಪಾದನೆಗಾಗಿ ಕಾಯುತ್ತಲೇ ಇವೆ. ನಿಷ್ಠಾವಂತ ಕೆಲಸಗಾರ ರಿದ್ದರೂ ಅವರ ಬಗೆಗೆ ಹಿರಿಯ ಅಧಿಕಾರಿಗಳು ತೋರಿಸುವ ಅನಾದರ ಮತ್ತು ಅಸಡ್ಡೆಯೂ, ಧನಸಹಾಯದ ಅಭಾವವೂ ಮೂಲ ಕಾರಣವಾಗಿ ಈ ಕೆಲಸ ಕುಂಠಿತವಾಗಿರುವುದು ವಿಷಾದನೀಯ. ಈ ತೊಡಕುಗಳು ಆದಷ್ಟು ಬೇಗ ನಿವಾರಣೆಯಾಗಿ ಅಪ್ರಕಟಿತ ಗ್ರಂಥಗಳು ಬೇಗ ಅಚ್ಚಾಗಿ ಹೊರಬರಲೆಂದು ಆಶಿಸೋಣ.



# ಕೇಂದ್ರ ಹಸ್ತಪ್ರತಿ ಭಂಡಾರ

ಹೀಗೆ ಪ್ರಾಚೀನ ಗ್ರಂಥಗಳ ಸಂಪಾದನಾ ಕಾರ್ಯಕ್ಕೆ ಅನುಕೂಲವಾಗಿ ವಿದ್ವಾಂಸರಿಗೆ ಬೇಕಾದ ಹಸ್ತಪ್ರತಿಗಳು ಸುಲಭವಾಗಿ ದೊರೆಯುವಂತಿರಬೇಕಾದುದು ಅತ್ಯಂತ ಅವಶ್ಯಕ. ಇದು ಸಾಧ್ಯವಾಗಬೇಕಾದರೆ ಕೇಂದ್ರ ಹಸ್ತಪ್ರತಿ ಭಂಡಾರವೊಂದು ರೂಪುಗೊಳ್ಳುವುದು ಅನಿವಾರ್ಯವಾಗಿದೆ.

ಅನೂಚಾನವಾಗಿ ಹಲವಾರು ಶತಮಾನಗಳಿಂದ ಪ್ರತಿಗಳಾಗಿ ಮರು ಪ್ರತಿಗಳಾಗಿ ಬಂದ ಹಸ್ತಪ್ರತಿಗಳೆಲ್ಲವೂ ನಮಗೆ ಈಗ ದೊರೆತಿಲ್ಲ. ಆದರೆ ದೊರೆತ ಹಸ್ತಪ್ರತಿಗಳು ವಿವಿಧೆಡೆಗಳಲ್ಲಿ ಸಂಗ್ರಹವಾಗಿ, ಕೆಲವು ಉಪಯೋಗವಾದರೆ ಮತ್ತೆ ಕೆಲವು ಮೂಲೆಗುಂಪಾಗಿ ಹಾಳಾಗಿ ಹೋಗಿರುವುದುಂಟು. ಈಗ ದೊರೆಯುವಷ್ಟನ್ನಾದರೂ ಸಂಗ್ರಹಿಸಿ ಸಂರಕ್ಷಿಸಬೇಕೆಂಬ ಬಯಕೆಯಿಂದ ಹಲವು ಸಂಸ್ಥೆಗಳು ಕೆಲಸ ಮಾಡುತ್ತಿವೆ. ಇವು ಈ ಕೆಲಸವನ್ನು ಹೆಚ್ಚು ಕಡಮೆ ಒಂದು ಶತಮಾನದಿಂದ ಮಾಡಿದರೂ ಎಲ್ಲ ಹಸ್ತಪ್ರತಿಗಳ ಸಂಗ್ರಹ ಬಯಸುವವರೆಲ್ಲರ ಕೈಗೆ ದೊರಕುವಂತೆ ಮಾಡುವುದು ಸಾಧ್ಯವಾಗಿಲ್ಲದಿರುವುದು ತುಂಬಾ ವಿಷಾದನೀಯ ಈ ದಿಸೆಯಲ್ಲಿ ಹಲವರು ಮಹನೀಯರು ತಮ್ಮ ಆಸಕ್ತಿ ಅಭಿರುಚಿಗಳಿಂದ ದುಡಿದರೂ ಸಾಕಷ್ಟು ಯಶಸ್ಸನ್ನು ಗಳಿಸದಾದರು. ಏಕೆಂದರೆ ಯಾರೇ ಒಬ್ಬ ವ್ಯಕ್ತಿ ಅಥವಾ ಸಂಸ್ಥೆ ಒಂದು ಕಾಲದಲ್ಲಿ ಮಾಡಿದಂತಹ ಕೆಲಸವನ್ನು ಆನಂತರ ಬಂದವರು ಅದೇ ಆಸಕ್ತಿಯಿಂದ ಮುಂದುವರಿಸದಿರುವುದು ಒಂದು ಕಾರಣವಾದರೆ, ಸಾಕಷ್ಟು ಹಣ, ಸರಿಯಾದ ಸಾಧನಗಳು, ತಕ್ಕಂತಹ ಯೋಜನೆಗಳು ದೊರೆಯದೇ ಹೋಗಿರುವುದು ಮತ್ತೊಂದು ಕಾರಣವಾಗಿದೆ. ಈ ಎಲ್ಲಕ್ಕಿಂತ ಮಿಗಿಲಾಗಿ ಹಣವನ್ನೊದಗಿಸುವವರ ಈ ಬಗೆಗಿನ ಅನಾಸಕ್ತಿ ಮುಖ್ಯ ಕಾರಣವೆನ್ನದೆ ವಿಧಿಯಿಲ್ಲ. ಈ ಬಗೆಗಿನ ಯಾವುದೇ ಯೋಜನೆಯನ್ನು ಮುಂದಿಟ್ಟರೂ ಇದಕ್ಕೆ ಒಪ್ಪಿಗೆ ಕೊಡುವಂತಹ ಅಧಿಕಾರಿಗಳು ಯಾವ ತಿಳುವಳಿಕೆಯೂ ಇಲ್ಲದೆ, ತಿಳಿದವರನ್ನು ಕೇಳುವ ಗೋಜಿಗೇ ಹೋಗದೆ ತಳ್ಳಿ ಹಾಕುವಂತಹ ಕಾರ್ಯ

ೆಯುತ್ತಿರುವುದರಿಂದ ಇಂತಹ ಪರಿಸ್ಥಿತಿ ಉಂಟಾಗಿದೆ. ಈ ಎಲ್ಲ ಕಾರಣ ದ್ದರೂ ಸಾಕಷ್ಟು ಮಟ್ಟಿಗೆ ಈ ದಿಸೆಯಲ್ಲಿ ಕಾರ್ಯಸಾಧನೆ ಮಾಡಿರುವ ವು ಸಂಸ್ಥೆಗಳಿವೆ. ಅವುಗಳು ಬೇರೆ ಬೇರೆ ಸ್ಥಳಗಳಲ್ಲಿ ಹಸ್ತಪ್ರತಿಗಳನ್ನು ಡಿಟ್ಟಿವೆ. ಆದರೆ ಇವುಗಳ ಉಪಯೋಗ ಎಲ್ಲ ವಿದ್ವಾಂಸರಿಗೆ ಒದಗುವುದು ಾತ್ರ ದುಸ್ತರವಾಗಿಯೇ ಉಳಿದಿದೆ. ಧಾರವಾಡದಲ್ಲಿನ ಒಬ್ಬರು ಮೂಡಬಿದರೆ ಲ್ಲಿರುವ ಪ್ರತಿಯನ್ನು ನೋಡಬೇಕೆಂದರೆ ಅದು ಪ್ರಯಾಸದ ಮಾತೇ ುತ್ತದೆ. ಈ ಸಂಗ್ರಹ ಕರ್ಣಾಟಕಕ್ಕೆ ಮಾತ್ರ ಸೀಮಿತವಾಗಿರದೆ ಇಡೀ ಭಾರತ, ಷ್ಟೇಕೆ ಲಂಡನ್ನಿಗೂ ವ್ಯಾಪಿಸಿರುವುದು ಮತ್ತೂ ದುಸ್ತರವಾಗಿದೆ.

ಹಸ್ತಪ್ರತಿಗಳ ಸಂಗ್ರಹ ಮಾಡುವಾಗ ಭಾಷೆಯ ವಿಷಯದ ಯಾವ ರತಮ್ಯವೂ ಇಲ್ಲದೆ ಒಟ್ಟಿನಲ್ಲಿ ಸಂಗ್ರಹವಾಗಿರುವುದರಿಂದ ಕೆಲವಡೆ ಕನ್ನಡ ಪ್ರತಿಗಳನ್ನು ವರ್ಷಾನುಗಟ್ಟಲೆ ತೆರೆದು ನೋಡುವವರೂ ಇಲ್ಲದೆ, ಸಂಗ್ರಹ ದಾಗ ಇದ್ದವರ ಆಸ್ಥೆ ಆಸಕ್ತಿಗಳು ಕ್ರಮೇಣ ಬಂದವರಲ್ಲಿ ಇಲ್ಲದೆ ಅವು ಡೆಯಲ್ಲಿಯೇ ನಶಿಸಿ ಹೋಗಿರುವುದನ್ನು ನಾನು ನೋಡಿದ್ದೇನೆ. ಇಂತಹ ಎಲ್ಲ ಪ್ರತಿಗಳನ್ನೂ ಉಳಿಸಿ ಉಪಯೋಗಕ್ಕೆ ಬರುವಂತೆ ಮಾಡುವ ಕಾರ್ಯವನ್ನು ಲಾದರೂ ಕೈಗೊಂಡರೆ ಮೇಲು. ಈಗ ದೊರೆಯುವಷ್ಟನ್ನೂ ಒಂದೆಡೆ ಸಿ ಕೇಂದ್ರ ಹಸ್ತಪ್ರತಿ ಭಂಡಾರವನ್ನು ಮಾಡುವುದು ತೀರ ಅಗತ್ಯವೂ ೋಗ್ಯವೂ ಆಗಿದೆ ಎಂಬುದನ್ನು ಈ ದಿಸೆಯಲ್ಲಿ ಯೋಚಿಸುವ ಎಲ್ಲರೂ ುವುದರಲ್ಲಿ ಸಂಶಯವಿಲ್ಲ. ಈ ಹಸ್ತಪ್ರತಿ ಭಂಡಾರದಲ್ಲಿ ಕೈಫಿಯತ್ತುಗಳು ರುಗಳು ಶಾಸನಗಳು (ಹಸ್ತಪ್ರತಿಗಳಲ್ಲಿ) ಮೊದಲಾದುವೂ ಸೇರಿರುತ್ತವೆ. ನಲ್ಲಿ ಹೇಳುವುದಾದರೆ ಕನ್ನಡ ಭಾಷೆಯ ಎಲ್ಲ ರೀತಿಯ ಹಸ್ತಪ್ರತಿಗಳ ್ರಹ ಆಗಬೇಕು.

ಹೀಗೆ ಕೇಂದ್ರ ಹಸ್ತಪ್ರತಿ ಭಂಡಾರವೊಂದಿದ್ದರೆ ಎಲ್ಲೆಲ್ಲಿಯೊ ಸಂಗ್ರಹವಾಗಿ ಶಾಗುತ್ತಿರುವ ಹಸ್ತಪ್ರತಿಗಳ ರಕ್ಷಣೆಯಾದಂತಾಗುತ್ತದೆ ; ಯಾವುದೇ ಹಸ್ತ ಯನ್ನು ಯಾವುದೇ ವ್ಯಕ್ತಿ ಬಯಸಿದರೆ ನೇರವಾಗಿ ಬಂದು ಅದರ ಸಹಾಯ ಯಬಹುದು ; ಇಲ್ಲವೆ ಮೈಕ್ರೊಫಿಲಂ ಅಥವಾ ಫೋಟೋ ಸ್ಟ್ಯಾಟ್ ಸದಲ್ಲಿ ತರಿಸಿಕೊಳ್ಳಬಹುದು.

ಕರ್ಣಾಟಕದಲ್ಲಿ ಇಂತಹ ಕೇಂದ್ರ ಹಸ್ತಪ್ರತಿ ಭಂಡಾರ ಸ್ಥಾಪಿತವಾದರೆ ಅದು ನಿಜಕ್ಕೂ ಕನ್ನಡಿಗರ ಹೆಮ್ಮೆಯ ಕೇಂದ್ರವಾಗಿ, ಅನೇಕ ವಿದ್ವಾಂಸರ ಕಣ್ಮಣಿಯಾಗಿ ಮೆರೆಯುವುದರಲ್ಲಿ ಸಂಶಯವಿಲ್ಲ. ಇದಕ್ಕೆ ಬೇಕಾದುದು ಧನ ಸಹಾಯ, ದುಡಿಯುವ ವ್ಯಕ್ತಿಗಳು. ಇಷ್ಟಾದರೆ ಈ ಕನಸಿನ ಲೋಕ ವಾಸ್ತವವಾಗಿ ಕನ್ನಡಿಗರ ಉಪಯೋಗಕ್ಕೆ ಬರುವಂತಾಗುವುದು ಬಹುದೂರವಿಲ್ಲ.



# ಸಹಾಯಕ ಗ್ರಂಥಸೂಚಿ


1. ಕನ್ನಡ ಗ್ರಂಥ ಸಂಪಾದನೆ : ಡಾ॥ ಡಿ. ಎಲ್. ನರಸಿಂಹಾಚಾರ್
ಶಾರದಾಮಂದಿರ, ಮೈಸೂರು, ೧೯೭೦

2. ಕನ್ನಡ ಗ್ರಂಥ ಸಂಪಾದನ ಶಾಸ್ತ್ರ : ಡಾ. ಎಂ. ಎಂ. ಕಲಬುರ್ಗಿ
ಸಿರಿಗನ್ನಡ ಪ್ರಕಾಶನ, ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾನಿಲಯ
ಧಾರವಾಡ-೩, ೧೯೭೨

3. ಗ್ರಂಥ ಸಂಪಾದನಾಶಾಸ್ತ್ರ ಪರಿಚಯ : ಸೀತಾರಾಮ ಜಾಗೀರ್‌ದಾರ್,
ಕನ್ನಡ ಸಾಹಿತ್ಯ ಸಂಘ, ರಂಗಂಪೇಟೆ (ಸುರಪುರ) ೧೯೭೮

4. ಹಸ್ತಪ್ರತಿ ಶಾಸ್ತ್ರ : ಸಂ. ಪ್ರೊ. ಎಂ. ವಿ. ಸೀತಾರಾಮಯ್ಯ ಮತ್ತು
ಡಾ॥ ಎಂ. ಚಿದಾನಂದಮೂರ್ತಿ

5. ಹಳೆಯ ಹೊನ್ನು : ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರಿ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೧೯೯೧

6. ಕರ್ನಾಟಕ ಶಾಸನಗಳ ಸಮೀಕ್ಷೆ : ಕೊ. ವೈ. ರಮೇಶ
ಬೆಂಗಳೂರು ೧೯೭೧

7. ಕನ್ನಡ ಹಸ್ತಪ್ರತಿಗಳ ಇತಿಹಾಸ : ಎಚ್. ದೇವೀರಪ್ಪ
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೭೭

8. ಗ್ರಂಥಸಂರಕ್ಷಣೆ : ಬಿ. ಎಸ್. ಸಣ್ಣಯ್ಯ
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೬೧

9. ನೇಮಿನಾಥಪುರಾಣಂ : ನೇಮಿಚಂದ್ರ ಸಂ. ಬಿ. ಎಸ್. ಸಣ್ಣಯ್ಯ
ಸಾಧನ ಸಾಹಿತ್ಯ ಮಂದಿರ, ಮೈಸೂರು ೧೯೬೧

10. ರಾಜಾವಳಿ ಕಥಾಸಾರ : ಸಂ. ಬಿ. ಎಸ್. ಸಣ್ಣಯ್ಯ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೮೮

11. ಜೀವಸಂಬೋಧನಂ : ಬಂಧುವರ್ಮ ಸಂ. ಪಂಡಿತ ಎಚ್. ಶೇಷಅಯ್ಯಂಗಾರ್
ಗೌ. ಓ. ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದರಾಸು ೧೯೫೫

12. ಕನ್ನಡ ಹಸ್ತಪ್ರತಿಗಳ ಮೈಕ್ರೊಫಿಲಂ ಸೂಚಿ : ಸಂ. ಬಿ. ಎಸ್. ಸಣ್ಣಯ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೮೮

13. ಸಾಹಸ ಭೀಮ ವಿಜಯಂ : ಸಂ. ಬಿ. ಎಸ್. ಸಣ್ಣಯ್ಯ ಮತ್ತು ರಾಮೇಗೌ
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೮೫

14. ಕರ್ಣಾಟಕ ಭಾರತಿ : ಸಂ. ೧–೧, ೨. ೧೬–೧, ೨

15. ಪ್ರಬುದ್ಧ ಕರ್ಣಾಟಕ : ೩೧–೨

16. Alberuni's India Ed. by Edward C. Sachan.

17. The Book of India : Ed. by B. S. Keshavan
National Book Trust, New Delhi 1986

18. Indian Archives Vol. I. 1947.

19. New York Times : Book-Review January 1933

20. Study of Manuscripts by Chinthaharan Chakravarti.

# ದಶಮಾನೋತ್ಸವ ಕೃತಿಮಾಲೆ

| | | |
|---|---|---|
| 1 | ಭಾಷಾಂತರ ಕಲೆ | 15-00 |
| 2 | ಸೃಜನಶೀಲತೆ ಮತ್ತು ಪಾಂಡಿತ್ಯ | 10-00 |
| 3 | ಹೊಸಗನ್ನಡದ ವ್ಯಾಕರಣ | 15-00 |
| 4 | ವೈಚಾರಿಕ ಜಾಗೃತಿ | 15-00 |
| 5 | ಹಸ್ತಪ್ರತಿಶಾಸ್ತ್ರ ಪರಿಚಯ | 15-00 |
| 6 | ಕಾನೂನು ಮತ್ತು ಸಂವಿಧಾನ | 15-00 |
| 7 | ತೌಲನಿಕ ಸಾಹಿತ್ಯ | ... |
| 8 | ಸಾಹಿತ್ಯ ಮತ್ತು ಮನಶ್ಶಾಸ್ತ್ರ | ... |
| 9 | ಕರ್ನಾಟಕ ಸಂಸ್ಕೃತಿ-ಭಾರತೀಯತೆ | ... |
| 10 | ಶಾಸನ ಪಠ್ಯ | ... |



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ : : ಬೆಂಗಳೂರು-೫೬೦ ೦೧೯